# ತೀರ್ಥಕ್ಷೇತ್ರ ಮಹಿಮಾ



ರಚನೆ :

**ಶ್ರೀಮತಿ ದೊಡ್ಡಿ ಸುಧಾಬಾಯಿ**

(ಶ್ರೀದೊಡ್ಡಿ ಗುಂಡುರಾಯರ ಧರ್ಮಪತ್ನಿ, ಬಳ್ಳಾರಿ)

**ವೆಂಕಟಚಂದ್ರ ಪ್ರಕಾಶನ**

ಯೋಗ ಪ್ರಸಾದ, ಶಿವರಾಮ ಮಾರ್ಗ

ಸತ್ಯನಾರಾಯಣ ಪೇಟೆ, ಬಳ್ಳಾರಿ - 583 103

"THEERTHA KSHETRA MAHIMA"
By **Smt. Doddi Sudhabai**

Pages : iv + 80




Price : 20/-

First Edition : 1998

Copies :



Publisher :
**Venkatachandra Prakashana,**
**Yoga Prasada, Shivarama Marga**
**Sathyanarayana Pete**
**Bellary - 583 103**

**This Book is printed and published with kind financial help of the Executive officer T.T. Shree Venkateshwaraswamy Devasthanam, Tirupathi under their Scheme "Aid to Publish Religious Books."**




Printers :
**Sathyasri Printers Pvt Ltd.,**
164, 5th Main, Chamarajpet,
Bangalore - 560 018
Phone : 625736

# ಲೇಖಕಿಯ ಮಾತು

ನನ್ನ ಕೃತಿರಚನೆಗಳಿಗೆಲ್ಲ ನನ್ನ ಪತಿ ಶ್ರೀಮಾನ್ ದೊಡ್ಡಿ ಗುಂಡೂರಾಯರ ಪ್ರೇರಣೆಯು ಮುಖ್ಯ ಕಾರಣ. ವಂಶಪಾರಂಪರ್ಯದಿಂದ ಅವರು ನ್ಯಾಯವಾದಿಗಳಾಗಿ ಜೀವಿಸಿದವರು. ಸ್ವತಂತ್ರ ಭಾರತದ ರಾಜಕಾರಣಿಗಳಾಗಿ ಬಳ್ಳಾರಿ ಜಿಲ್ಲೆಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಕೆಲಸ ಮಾಡಿದವರು. ಆಚಾರ್ಯ ಮಧ್ವರ ಗ್ರಂಥವನ್ನಭ್ಯಾಸ ಮಾಡುವುದರಲ್ಲಿ ಬಹು ಆಸಕ್ತಿ ತೋರಿದವರು. ಸುದೈವದಿಂದ ನನ್ನ ಹೆತ್ತ ಮನೆ ಹಾಗೂ ಕೈಹಿಡಿದು ಬಂದ ಬಳ್ಳಾರಿಯ ಈ ದೊಡ್ಡೀ ಮನೆತನಗಳಲ್ಲಿ ಆಧ್ಯಾತ್ಮದ ವಾತಾವರಣವಿತ್ತು. ಇದರಿಂದಾಗಿ ಬಾಲ್ಯದಲ್ಲಿಯೇ ನನ್ನ ಮನಸ್ಸಿಗೆ ಒಂದು ರೀತಿಯ ಸಾಹಿತ್ಯದ ಸಂಸ್ಕಾರವು ಲಭಿಸಿತು. ನನ್ನ ಪತಿಯೊಂದಿಗೆ ತೀರ್ಥಕ್ಷೇತ್ರಗಳ ಸಂದರ್ಶನಗಳಿಗಾಗಿ ಅನೇಕ ಸಲ ಸುತ್ತಾಡುವ ಭಾಗ್ಯವೂ ಲಭಿಸಿತು. ನ್ಯಾಯಕ್ಕಾಗಿ ಹೋರಾಡುವ ಪತಿಯ ಸಹವಾಸದಿಂದಾಗಿ ಅವರ ಪ್ರೋತ್ಸಾಹದಿಂದ ನಿಧಾನವಾಗಿ ಹರಿದಾಸರ ಕೃತಿಗಳ ಅಭ್ಯಾಸವನ್ನಾರಂಭಿಸಿದೆ. ಶ್ರೀಮಠದ ಪಂಡಿತರು ಹಾಗೂ ಹೆಸರಾಂತ ಪುರಾಣಿಕರ, ಹರಿದಾಸರ ಹರಿಕಥೆಗಳ ಕಾರ್ಯಕ್ರಮಗಳು ಆಗಾಗ ನಮ್ಮ ಮನೆಯಲ್ಲಿ ನಡೆಯುತ್ತಲಿದ್ದವು. ಈ ಎಲ್ಲ ವಿಚಾರಗಳು ನನ್ನ ಮನದ ಅಂತರಂಗದ ಚಿಂತನೆಗೆ ಚಾಲನೆಯನ್ನಿತ್ತವು. ಒಂದೊಂದಾಗಿ ಕೃತಿರಚನೆಯಾಗತೊಡಗಿದಾಗ ನನ್ನ ಪತಿಗಳಿಂದ ಮೆಚ್ಚುಗೆಯ ಮಾತುಗಳನ್ನು ಕೇಳತೊಡಗಿದೆ. ಅನಿರ್ವಚನೀಯವಾದ ಹುಮ್ಮಸ್ಸಿನಿಂದ ಕೃತಿ ರಚನೆಯಲ್ಲಿ ನಿರತಳಾದೆ. ರಾಯರ ನೆರವಿನಿಂದಾಗಿ ಈಗಾಗಲೇ ಕೆಲವು ಕೃತಿಗಳು ಗ್ರಂಥರೂಪದಲ್ಲಿ ಹೊರಬರುವಂತಾಗಿವೆ.

ನನ್ನವರಿಗೆ ವೇದವೇದಾಂತಗಳಲ್ಲಿ ಬಹು ನಂಬಿಕೆ. ಆದುದರಿಂದ ವಿಷ್ಣುಪಂಚಕಾಮೃತ, ಪವಮಾನ ಹೋಮ, ಅರವತ್ತನೆಯ ವರುಷದಲ್ಲಿ ಆಚರಿಸುವ ಶಾಂತಿ ಹೋಮ, ಬ್ರಹತಿ ಸಹಸ್ರ ಹೋಮ, ಭೀಮರಥಿ ಹೋಮ, ಸಹಸ್ರ ಚಂದ್ರದರ್ಶನ ಹೋಮ ಹೀಗೆ ಒಂದಲ್ಲ, ಎರಡಲ್ಲ ಅನೇಕ ರೀತಿಯಲ್ಲಿ ಅವರು ದೇವಬ್ರಾಹ್ಮಣರ ಆರಾಧನೆಯಲ್ಲಿ, ಸೇವೆಯಲ್ಲಿ ನಿರತರಾದರು. ಅವರಿಗೆ ಕುಟುಂಬದ

ಆಬಾಲವೃದ್ಧರೆಲ್ಲರ ಸಹಕಾರವು ಲಭಿಸಿತು. ಗುರುಗಳ ಆಶೀರ್ವಾದವೂ ದೊರೆಯಿತು. ಸುದೀರ್ಘ ಕಾಲದ ತುಂಬು ಜೀವನ ನಡೆಸಿದ ನನ್ನ ಪತಿದೇವರು ದಿನಾಂಕ 11.02.1997 ರಂದು ಯಾವ ದಿನ ಅವರು ಜನ್ಮವೆತ್ತಿದ್ದರೋ ಅದೇ ದಿನ ಭೂಲೋಕ ಯಾತ್ರೆಯನ್ನು ಮುಗಿಸಿದರು. ಆಗ ಅವರಿಗೆ ಎಂಭತ್ತೊಂಬತ್ತು ವರುಷ ವಯಸ್ಸಾಗಿತ್ತು.

ಪತಿಯನ್ನು ಕಳೆದುಕೊಂಡು ವಿರಹಿಣಿಯಾದಾಗ ಅವರೊಂದಿಗೆ ಸಂಚರಿಸಿದ, ಅನೇಕ ತೀರ್ಥಕ್ಷೇತ್ರಗಳ ನೆನಪು ಮರುಕಳಿಸತೊಡಗಿತು. ಹೃದಯಾಂತರಾಳದಲ್ಲಿ ನಡೆದ ಒಡನಾಟದ ಜೀವನದ ಹೊನಲು ಪುನಃ ಕೃತಿರೂಪದಲ್ಲಿ ನನ್ನವರೇ ಅವ್ಯಕ್ತವಾಗಿ ನಿಂತು ಹೊರತರುವಂತೆ ಮಾಡಿದರು. ಶ್ರೀ ಗುಂಡೂರಾಯರು ಕೆಲವು ವರುಷಗಳವರೆಗೆ ತಿರುಮಲೆಯಲ್ಲಿರುವ ಕರ್ನಾಟಕ ಸರಕಾರದ ಛತ್ರದ ಮೇಲ್ವಿಚಾರಣಾ ಕಮಿಟಿಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅವರ ಸೇವೆಗೆ ಮೆಚ್ಚಿದ ತಿರುಮಲಾಧೀಶನಾದ ಶ್ರೀನಿವಾಸನೇ ಇಂದು ನನ್ನ ಕೃತಿಯನ್ನು ನಾಲ್ಕಾರು ಭಕ್ತರ ಕೈಯಲಿಡುವಂತೆ ಮಾಡಿದ್ದಾನೆ. ಎಂದೆನಿಸುವದು. ಆತನು ನಮ್ಮ ಮನೆಯ ಕುಲದೇವನಾಗಿದ್ದಾನೆ. ಆತನ ಈ ಅನುಗ್ರಹವನ್ನು ನನ್ನ ಪತಿ ಶ್ರೀ ಗುಂಡೂರಾಯರನ್ನು ಮನಸಾ ಸ್ಮರಿಸಿಕೊಳ್ಳುತ್ತಾ ಕುಟುಂಬದ ಕಲ್ಯಾಣವನ್ನು ಚಿಂತಿಸುತ್ತಾ, ಆ ದೇವದೇವನಾದ ಶ್ರೀನಿವಾಸನ ಪಾದಾರವಿಂದಗಳಲ್ಲಿ ಈ ಕೃತಿಯನ್ನು ಸಮರ್ಪಿಸುತ್ತೇನೆ.

31.7.98 ಶ್ರೀಮತಿ ದೊಡ್ಡಿ ಸುಧಾಬಾಯಿ ಗುಂಡೂರಾವ್

ಶ್ರಾವಣ ಶುಕ್ಲಪಕ್ಷ ಶುಕ್ರವಾರ

ಬಹುಧಾನ್ಯ ಸಂವತ್ಸರ

# ತೀರ್ಥಕ್ಷೇತ್ರ ಮಹಿಮೆ

ಜಗದ್ವ್ಯಾಪ್ತ, ಅತಿವಿಚಿತ್ರವು, ಅದ್ಭುತವು ಸತ್ಯವೂ ಆದ ವಿಶ್ವವನ್ನು ನಿರ್ಮಿಸಿರುವುದರಿಂದಲೇ ಕ್ಷರಾಕ್ಷರಕ್ಕೆ ಉತ್ತಮ ಪುರುಷನಾದ ಶ್ರೀ ಮನ್ನಾರಾಯಣನು ಮಹಾ ಮಹಿಮೋಪೇತನು, ನಿರ್ದೋಷನು, ಅನಂತಾನಂತಗುಣ ಪರಿಪೂರ್ಣನೆಂದೆನಿಸಿರುವನು. ಇಂತಹ ವೇದ ಸ್ವರೂಪವನ್ನು ಜ್ಞಾನ ಭಕ್ತಿ ವೈರಾಗ್ಯಾದಿಗಳಿಂದ ಮತ್ತು ಶಾಸ್ತ್ರಾರ್ಥದಿಂದ ತಿಳಿದು ಕೊಳ್ಳುವುದು ಬಹಳ ಶ್ರೇಷ್ಠವಾದದ್ದು, ಮಿಕ್ಕಿದೆಲ್ಲಾ ನಶ್ವರವಾದದ್ದು, ಹರಿಭಕ್ತಿಯೇ ಮುಖ್ಯವಾದದ್ದಾದರೂ ಧರ್ಮ ಸ್ವರೂಪನಾದ ಭಗವಂತನಿಂದಲೇ ಧರ್ಮವು ಪ್ರಣೀತವಾದದ್ದು, ಇದರ ಸಂಪೂರ್ಣ ಸಾಕಲ್ಯೇನ ತಿಳಿಯಲು ಬ್ರಹ್ಮಾದಿ ದೇವತೆಗಳು, ಋಷಿಗಳು, ಸಿದ್ಧರು ಮೊದಲಾದವರಿಗೆ ಶಕ್ಯವಿಲ್ಲದ ಮೇಲೆ ಮಿಕ್ಕವರ ಪಾಡೇನು? ಸಪ್ತ ದ್ವೀಪಗಳುಳ್ಳ ಭೂ ಮಂಡಲದ ನವಖಂಡಗಳಲ್ಲಿ ಭರತ ಖಂಡವೇ ಕರ್ಮ ಸಾಧನೆ ಭೂಮಿ. ಅಧಿಕಾರಿ ಅನಧಿಕಾರಿ ದೇವತೆಗಳು ಭಾರತದಲ್ಲಿ ಪುಣ್ಯ ಸಾಧನೆ ಮಾಡಿಕೊಳ್ಳಬೇಕಾಗಿ ಒಂದು ಅಂಶದಿಂದ ಅವತಾರ ಮಾಡಿ ತಮ್ಮ ಸಾಧನೆ ಮಾಡಿಕೊಳ್ಳುತ್ತಾರೆ. ಇಂತಹ ಪವಿತ್ರವಾದ ಭರತ ಭೂಮಿಯಲ್ಲಿ ಅನಂತ ಜನ್ಮಗಳು ಜೀವರಿಗೆ ಅವರ ಕರ್ಮಾನುಸಾರ ಬರುತ್ತವೆ. ಆದ್ದರಿಂದ ಶ್ರೇಷ್ಠವಾದ ವೈಷ್ಣವ ಜನ್ಮ ಬಂದಾಗ ಅದರಲ್ಲೂ ಗಾಳಿ ಬಂದಾಗ ತೂರಿಕೊಳ್ಳಿರೊ ಎಂಬಂತೆ ಬ್ರಾಹ್ಮಣ ಶರೀರ ಬಂದಾಗ ನಿತ್ಯ ನೈಮಿತ್ಯಕ ಕರ್ಮಗಳನ್ನಾಚರಿಸಿ ಭಗವಂತನಲ್ಲಿ ಜ್ಞಾನ ಭಕ್ತಿ ವೈರಾಗ್ಯಾದಿಗಳಿಂದ ಶ್ರೀ ಹರಿಯನ್ನು ನಂಬಿ ಸಕಲ ಸತ್ಕರ್ಮಗಳನ್ನು ಭಗವಂತನಿಗೆ ಅರ್ಪಿಸಬೇಕು. ತೀರ್ಥಯಾತ್ರೆ ಪುಣ್ಯ ನದಿಗಳ ಸ್ನಾನ ವಿಹಿತ ಧರ್ಮಾನುಷ್ಠಾನ ಮತ್ತು ನಿಷ್ಕಾಮ ಕರ್ಮ ಇವುಗಳಿಂದ ಅಂತಃ ಕರಣ ಶುದ್ಧಿಯಾಗಿ ಕ್ಷೇತ್ರಜ್ಞನಾದ ಪರಮಾತ್ಮನಲ್ಲಿ ನಿರ್ಮಲ ಭಕ್ತಿ ಹುಟ್ಟಿ ಮೋಕ್ಷ ಮಾರ್ಗಕ್ಕೆ ಸಾಧನವಾಗುವುದು. ಶ್ರೀಮಧ್ವಸಿದ್ಧಾಂತದ ಅಪೂರ್ವ ವೈಶಿಷ್ಟ್ಯಗಳಲ್ಲಿ ಅತಿ ಮುಖ್ಯವಾದದ್ದು ವಿಷ್ಣು ಸರ್ವೋತ್ತಮತ್ವ ವಾಯುಜೀವೋತ್ತಮತ್ವ. ಭಯ ಲೋಭ ಮೋಹ ಮೊದಲಾದವುಗಳಿಂದ ಎಷ್ಟು ಕಷ್ಟ ಬಂದರು ಧರ್ಮಮಾತ್ರ ಬಿಡಬಾರದು. ಧರ್ಮೋರಕ್ಷತಿ ರಕ್ಷಿತಃ। ಅಂದಿದ್ದಾರೆ ಪುರಂದರದಾಸರು.

ನೇತ್ರಾವತಿ ಶಲ್ಮಾಲಿ ಪದ್ಮಾಸರೋವರ ಅನೇಕ ಪುಣ್ಯ ನದಿಗಳು, ಜೀವನದಿಗಳು ಹುಟ್ಟಿ ಹರಿಯುವ ಮತ್ತು ಭಾರತ, ಭಾಗವತ, ರಾಮಾಯಣ ಮೊದಲಾದ ಉತ್ಕೃಷ್ಟ

ಗ್ರಂಥಗಳಿರುವ ಭಾರತದಲ್ಲಿ ಹರಿಸರ್ವೋತ್ತಮ ವಾಯುಜೀವೋತ್ತಮ ಜ್ಞಾನವನ್ನರಿತು ಜನ್ಮತಾಳುವುದು ಬಹಳ ಶ್ರೇಷ್ಠವಾದದ್ದು. ಶ್ರೀಮನ್ನಾರಾಯಣನು ಇಪ್ಪತ್ತೊಂದು ಸಲ ಅವತರಿಸಿ ದುಷ್ಟ ಶಿಕ್ಷಣ ಶಿಷ್ಟ ಪೋಷಣೆಗಾಗಿ ಓಡಾಡಿದನು. ಭಾರತ ಭೂಮಿಯಲ್ಲಿ, ಶ್ರೀ ಮಧ್ವಾಚಾರ್ಯರು ಇಪ್ಪತ್ತೊಂದು ಕುಭಾಷ್ಯವನ್ನು ಖಂಡನೆ ಮಾಡಿದ್ದು. ಭಾರತ ಭೂಮಿಯಲ್ಲಿ.

ಬೇರೆ ದೇಶದ ಭಾಷೆಗಳಲ್ಲಿ ಧರ್ಮ ಎಂಬ ಪದಕ್ಕೆ ಸರಿಯಾದ ಅರ್ಥವಿಲ್ಲ. ಶಿಸ್ತು (ಡಿಸಿಪ್ಲೀನ್) ಅಂತ ಮಾತ್ರ ಅಂತಾರೆ. ಆದರೆ ಧರ್ಮ ಬೇರೂರಿದ ಭಾರತದಲ್ಲಿ ಧರ್ಮವೆಂದ ತಕ್ಷಣ ತಿಳಿದುಕೊಂಡರು ನಮ್ಮ ಭಾರತೀಯರು. ಅದೇ ನಮ್ಮ ಭಾರತ ದೇಶದ ಒಂದು ವೈಶಿಷ್ಟ್ಯ. ಬೇರೆ ದೇಶದವರಿಗೆ ಧರ್ಮವಿಲ್ಲ ಎಂದಲ್ಲ. ಬೇರೆ ದೇಶದ ಕೆಲವು ಜನಾಂಗದವರು ಗೋಮಾಂಸ ಭಕ್ಷಣ, ವಿವಾಹವಿಚ್ಛೇದನ, ಅನ್ಯಜಾತಿ ವಿವಾಹಾದಿಗಳು ಅವರ ಆಚಾರ ವಿಚಾರಗಳಲ್ಲಿ ಬಹಳ ವ್ಯತ್ಯಾಸವುಂಟು.

ಪಂಚಮವೇದಕ್ಕೆ ಸಮಾನವಾದ ಶ್ರೀಮನ್ಮಹಾಭಾರತದಲ್ಲಿ ಶ್ರೀ ಲಕ್ಷ್ಮೀ ನಾರಾಯಣರದು ಪ್ರಥಮಸ್ಥಾನವಾದರೆ, ಭರತ ಭಾರತಿಯರದು ದ್ವಿತೀಯ ಪಾತ್ರವಾಗಿದೆ. ಅದಕ್ಕೆ ಶ್ರೀ ಹರಿಸರ್ವೋತ್ತಮ ವಾಯುಜೀವೋತ್ತಮ ಎಂಬುವ ನುಡಿ ಸಿದ್ಧಶುದ್ಧವಾದದ್ದು. ಶ್ರೀಮನ್ನಾರಾಯಣನ ಅನಂತಾನಂತ ಕೋಟಿ ಮಹಿಮೆ ಗುಣಗಳನ್ನು ಅಕ್ಷರ ಪುರುಷಳಾದ ಶ್ರೀ ಮಹಾಲಕ್ಷ್ಮಿ ವರ್ಣಿಸಿರುವಳು. ಶ್ರೀಹರಿಯು ಮೂಲ ರೂಪಕ್ಕೂ, ಅವತಾರರೂಪಕ್ಕೂ ಭೇದವಿಲ್ಲ. ಅಚಿಂತ್ಯಾದ್ಭುತಶಕ್ತಿವುಳ್ಳ ಪರಮಾತ್ಮನ ಮಹಿಮೆ ಸಂಪೂರ್ಣ ತಿಳಿಯಲು ಲಕ್ಷ್ಮೀದೇವಿಗೂ ಅಸಾಧ್ಯ.

ಜ್ಞಾನ ಸ್ವರೂಪರು ಕ್ಷರ ಪುರುಷರಾದ ಬ್ರಹ್ಮದೇವರು ಮೊದಲ್ಗೊಂಡು ಪುಷ್ಕರಾದಿ ದೇವತೆಗಳವರಿಗೂ ಎಲ್ಲರುಕ್ಷರರಾಗುವರು, ಜ್ಞಾನ ಸ್ವರೂಪಳಾದ ಮತ್ತು ವೇದವಿದ್ಯಾಭಿಮಾನಿನಿ ಭಾರತೀದೇವಿ, ದ್ರೌಪತಿ ದೇವಿಯಾಗಿ ಭೂಮಿಯಲ್ಲಿ ಅವತರಿಸಿ ಸಕಲ ಧರ್ಮಗಳು ಲೋಕಕ್ಕೆ ತೋರಿರುವಳು. ವಿರಾಟರಾಜನ ಮಗಳಾಗಿ, ಕುಂತಿಯ ಸೊಸೆಯಾಗಿ, ಪಂಚಪಾಂಡವರ ಪತ್ನಿಯಾಗಿ, ಶ್ರೀಕೃಷ್ಣ ಪರಮಾತ್ಮನ ತಂಗಿಯಾಗಿ ಸುಭದ್ರೆಯ ಸವತಿಯಾಗಿ ಮತ್ತು ಸತ್ಯಭಾಮೆಯ ನಾದಿನಿಯಾಗಿ ಉಪ ಪಾಂಡವರ ತಾಯಿಯಾಗಿ, ಪರೀಕ್ಷಿತರಾಜಗೆ ಅಜ್ಜಿಯಾಗಿ, ನಡೆದುಕೊಂಡು ಈ ಅಷ್ಟಾವಧಾನಿ

ಕೆಲಸವನ್ನು ಹೇಗೆ ಪೂರೈಸಿದಳೆಂಬುದು ಮಹಾಭಾರತದಲ್ಲಿ ಸ್ಪಷ್ಟವಾಗಿ ತಿಳಿದು ಬರುವುದು.

ಪ್ರಾಚೀನ ಕಾಲದ ಸ್ತ್ರೀಯಾದ ದ್ರೌಪತಿಯ ಅಷ್ಟು ಪಾತ್ರವನ್ನು ಈಗಲೂ ಕೆಲವು ಭಾರತ ನಾರಿಯರು ಆದಷ್ಟು ಅನುಕರಿಸುವುದು ಕಂಡು ಬರುವುದು. ಸ್ತ್ರೀಯರಿಗೆ ಸತ್ಯ, ಶೀಲ, ಸಹನೆ, ಶಾಂತಿ ಇರತಕ್ಕದ್ದು. ಶ್ರೀಮನ್ಮಹಾಭಾರತದ ಪರಿಚಯ ಸಾಧಾರಣವಾಗಿ ಎಲ್ಲರಿಗೂ ತಿಳಿದಿರುತ್ತದೆ. ಇದು ಭಾರತದ ಹೆಮ್ಮೆಯ ಮಾತಾಗಿದೆ. ಪುರುಷರು, ಧರ್ಮಿಷ್ಟರು ಅನೇಕ ಯತಿವರೇಣ್ಯರು, ದಾಸವರೇಣ್ಯರು ಭಾಗವತೋತ್ತಮರು, ತ್ರಿಧಾಮ ತ್ರಿಸತ್ಯ ತ್ರಿಯುಗನಾದ ಭಗವಂತನ ಆಜ್ಞಾನುಸಾರ ಭರತ ಭೂಮಿಯಲ್ಲಿ ಜನಿಸಿ ಲೋಕ ಕಲ್ಯಾಣವನ್ನು ಮಾಡಿರುವರು. ವಾಯು ದೇವರು ಹನುಮ, ಭೀಮ, ಮಧ್ವರಾಗಿ ಅವತರಿಸಿ ಭಗವತ್ ಸೇವಾ ನಿರತರಾಗಿ ವಿಷ್ಣು ಸರ್ವೋತ್ತಮತತ್ತ್ವವನ್ನು ಪ್ರತಿಪಾದಿಸಿದ ಅಭಿನ್ನಭಕ್ತರು. ಅದಕ್ಕೆ ರಾಮಶ್ಯ ಮಹಿಮ ಹನುಮಶ್ಯ ಪರಾಕ್ರಮ, ಕೃಷ್ಣಶ್ಯ ಮಹಿಮ, ಭೀಮಶ್ಯ ಪರಾಕ್ರಮ, ವೇದವ್ಯಾಸಶ್ಯಮಹಿಮ, ಮಧ್ವಶ್ಯ ಪರಾಕ್ರಮ ಎಂಬುದು ಭಾವಾರ್ಥ. ಭಾಗವತೋತ್ತಮರು ಭಗವದಿಚ್ಛಾನುಸಾರ ರಾತ್ರಿ ಹಗಲು ಶ್ರಮಿಸಿ ಶೋಧಿಸಿ ಪಠಿಸಿ ಸಚ್ಛಾಸ್ತ್ರವೆಂಬ ಜ್ಞಾನಾಮೃತವನ್ನು ದೊಡ್ಡ ದೊಡ್ಡ ಕಡಾಯಿಗಳಲ್ಲಿ ತುಂಬಿಟ್ಟ ಜ್ಞಾನ ಭಂಡಾರವನ್ನು ಈಗ ಜ್ಞಾನವೃದ್ಧರು ಅವರವರ ಯೋಗ್ಯತಾನುಸಾರ ತೆಗೆದುಕೊಂಡು ಸಜ್ಜನರಲ್ಲಿ ಹಂಚಿ ಉದ್ಧಾರ ಮಾಡುವುದು ಬಹಳ ಶ್ಲಾಘನೀಯವಾದದ್ದು. ಇದರಿಂದ ಪವಿತ್ರವಾದ ಪುಣ್ಯ ನದಿಗಳ ಸ್ನಾನ, ಪುಣ್ಯಕ್ಷೇತ್ರಗಳ ಸಂದರ್ಶನ, ಕ್ಷೇತ್ರ ನಾಯಕ ಪರಮಾತ್ಮನ ಧ್ಯಾನ ದರುಶನ ಅರ್ಚನ ಸೇವನ ಸಚ್ಛಾಸ್ತ್ರ ಶ್ರವಣ ಮಹಾತ್ಮರ ಸೇವಾ ಇವೇ ಮೊದಲಾದವುಗಳಿಂದ ಸಕಲ ಸಜ್ಜನರಿಗೆ ಭಗವತ್ ಪ್ರಸಾದವು ದೊರೆಯುವುದೆಂಬುದರಲ್ಲಿ ಸಂಶಯವಿಲ್ಲ.

ಪರಮ ಮಂಗಳಕರನು ಮತ್ತು ಓಂಕಾರಶಬ್ದವಾಚ್ಯನಾದ ಪರಮಾತ್ಮನನ್ನು ಭಕ್ತಿಯಿಂದ ಭಜಿಸಿದವರ ಸಕಲ ಅನಿಷ್ಟಗಳು ಪರಿಹಾರವಾಗಿ ಇಷ್ಟ ಪ್ರಾಪ್ತಿ ಆಗುವದು.

ಅಗ್ನಿಯಲ್ಲಿ, ಗೋವಿನಲ್ಲಿ, ಸೂರ್ಯನಲ್ಲಿ, ವೇದ ಪಾರಂಗತನಾದ ಬ್ರಾಹ್ಮಣನಲ್ಲಿ ಪರಮಾತ್ಮನ ಸನ್ನಿಧಾನವಿರುವುದರಿಂದ ಸದಾ ಹರಿಧ್ಯಾನ ಮಾಡತಕ್ಕದ್ದು. ಗೋಪಾಲಕೃಷ್ಣ ನಿರ್ಮಲಭಕ್ತಿಗೆ ಒಲಿದಷ್ಟು ಬೇರೆ ಯಾವದಕ್ಕೂ ಒಲಿಯುವವನಲ್ಲ.

ಗೋಪಿಕಾಸ್ತ್ರೀಯರು ಭಕ್ತಿಯಿಂದ ಪರವಶರಾಗಿ. ನರ್ತನ ಮಾಡಿದರು. ಬಂದ ಕೃಷ್ಣ ಚೆಂದದಿಂದ ಬಂದ ನೋಡೆ! ಗೋಪವೃಂದದಿಂದಾನಂದಿಸುತ ಬಂದನೋಡೆ'' ವಾಸುದೇವ ವಿಠಲತಾ ಬಂದ ನೋಡೆ.'' (ಎಂದು ಹಾಡಿದರು). ವಿಷಯ ಭೋಗಾದಿಗಳಿಂದ ಪುನಃ ಪುನಃ ಬಾಧೆ ಪಡುತ್ತಿರುವ ಸಂಸಾರ ಸಾಗರಕ್ಕೆ ಹರಿಧ್ಯಾನ ಒಂದು ನಾವೆಯ ಹಾಗೆ ಇದೆ. ಒಂದಲ್ಲ ಒಂದು ರೀತಿ ಸದಾ ಹರಿಸೇವೆ ಧ್ಯಾನ ಮಾಡುತ್ತಾ ಹರಿ ಮಹಿಮೆ ಕೊಂಡಾಡುತ್ತಿರಬೇಕು. ಶ್ರೀಹರಿ ಗುಣಗಳು ಅನಂತಾನಂತ ದುಃಖರಹಿತ ಆನಂದ ತ್ಯಾಗ ನಿತ್ಯಶುದ್ಧಿ ದಯ ದಾನ ಸತ್ಯ ಸಂತೋಷ ನಿಷ್ಕಪಟ ಶಾಂತ ದಾಂತ ತಪಸ್ಸು ಶೃತಿ ಪ್ರಸಿದ್ಧಿ ಸರ್ವಜ್ಞಶಕ್ತಿ ಸ್ವಾತಂತ್ರ ತೇಜಸ್ಸು ಶೀಲ ಸಹನ ಬಲಮ ಕೌಶಲ್ಯ ಸದ್ಗುಣೈಶ್ವರ್ಯ ಸ್ಥೈರ್ಯ ಆಸ್ತಿಕ್ಯ ಕೀರ್ತಿ ಮಾನ ಅಹಂಕಾರ ರಹಿತ ಗಾಂಭೀರ್ಯ ಕಾಂತಿ ಮೊದಲಾದ ಅನೇಕಾನೇಕ ಗುಣಗಳುಳ್ಳ ಇಂತಹ ಹರಿಯನ್ನು ಉಪಾಸನೆ ಮಾಡಿದರೆ ಅದರಲ್ಲಿ ಒಂದೆರಡು ಗುಣಗಳಾದರೂ ಯೋಗ್ಯ ಜೀವರಿಗೆ ಸಿಗಬಹುದು ಅಂತಾರೆ ಹಿರಿಯರು. ಭಗವಂತನನ್ನು ಪ್ರತ್ಯಕ್ಷ ಆಗಮ ನಿಗಮದಿಂದ ತಿಳಿದುಕೊಳ್ಳಬೇಕು. ಶೃತಿ ವಾಕ್ಯ, ಸ್ಮೃತಿವಾಕ್ಯ, ಆಪ್ತವಾಕ್ಯಗಳನ್ನು ನಂಬಲೇ ಬೇಕು. ವೇದಗಳೆಂಬ ಮಹಾವೃಕ್ಷಕ್ಕೆ ಧರ್ಮವೆಂಬುವುದು ಪುಷ್ಪ, ಅರ್ಥಯೆಂಬುದು ಪತ್ರ, ಕಾಮ ಎಂಬುದು ಚಿಗುರೆಲೆಗಳು, ಮಹಾಫಲವೇ ಮೊಕ್ಷಕೆ ಭಾರತ ಭಾಗವತಾದಿ ಫಲಗಳು ವೇದವ್ಯಾಸರಿಂದ ಸಜ್ಜನರ ಸಮೂಹಕ್ಕೆ ಕೊಡಲ್ಪಟ್ಟಿದೆ.

ಭಾಗವತೋತ್ತಮರು ಉತ್ಕೃಷ್ಟವಾದ ಗ್ರಂಥಗಳನ್ನು ರಚಿಸಿ ಮಧ್ವ ಸಿದ್ಧಾಂತವೆಂಬ ವೃಕ್ಷ ಫಲಿಸುವಂತೆ ಮಾಡಿದರು.

ವ್ಯಾಸಕೂಟ, ದಾಸಕೂಟದ ಮಿಲನವು ಅತ್ಯದ್ಭುತವಾದದ್ದು. ಶ್ರೀ ಮಧ್ವಾಚಾರ್ಯರು ಶಿಷ್ಯರಾದ ಶ್ರೀ ನರಹರಿತೀರ್ಥರು ದಾಸ ಕೂಟದ ಬೀಜವನ್ನು ಬಿತ್ತಿದರು; ಶ್ರೀ ಶ್ರೀಪಾದರಾಜರಿಂದ ಮೊಳಕೆ ಒಡೆಯಿತು; ಶ್ರೀ ವ್ಯಾಸರಾಜರಿಂದ ವೃಕ್ಷವಾಯಿತು; ಶ್ರೀ ಪುರಂದರ ದಾಸರು, ಶ್ರೀ ವಾದಿರಾಜರು, ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು, ಶ್ರೀ ಜಗನ್ನಾಥದಾಸರು ಮೊದಲಾದ ಭಗವದ್ಭಕ್ತರಿಂದ ಮಧುರವಾಗಿ ಹಣ್ಣಾಗಿ, ಸಜ್ಜನರಿಗೆ ಹಂಚಲ್ಪಟ್ಟಿತು. ವ್ಯಾಸ ಕೂಟದ ಸಾರವೆಲ್ಲಾ ದಾಸ ಸಾಹಿತ್ಯದಲ್ಲಿ ಹರಿದಾಸರು ಪದ ಪದ್ಯವುಗಾಭೋಗ ಸುಳಾದಿಗಳನ್ನು ಕನ್ನಡದಲ್ಲಿ ರಚಿಸಿರುವರು. ಮತ್ತು ಲೋಕ ಕಲ್ಯಾಣ ಮಾಡಿರುವರು. ಸಂಸ್ಕೃತ ತಿಳಿಯದ ಜನರಿಗೂ

ಮತ್ತು ಸ್ತ್ರೀಯರಿಗೂ ಇದರಿಂದ ಬಹಳ ಅನುಕೂಲವಾಯಿತು. ವ್ಯಾಸಕೂಟ ತಾಯಿ ಹಾಗೆ, ದಾಸ ಕೂಟ ಹೆಂಡತಿ ಹಾಗೆ, ಸಂಸ್ಕೃತ ಮೂಲಮೂರ್ತಿ, ಆದರೆ ಕನ್ನಡ ಉತ್ಸವಮೂರ್ತಿ ಎಂದು ಅಂತಾರೆ, ಜ್ಞಾನಿವರೇಣ್ಯರು ಯತಿವರೇಣ್ಯರೂ ಆದ ಶ್ರೀ ವಾದಿರಾಜರು ಮತ್ತು ದಾಸವರೇಣ್ಯರಾದ ಶ್ರೀ ವಿಜಯದಾಸರು ಶಿಷ್ಯ ಸಂಪತ್ತಿನೊಡನೆ ಕೂಡಿಕೊಂಡು ಭಾರತದ ಉದ್ದಗಲವಿರುವ ಬದರಿಕಾಶ್ರಮದಿಂದ ಕನ್ಯಾಕುಮಾರಿವರಿಗೂ ಸಕಲ ಪುಣ್ಯತೀರ್ಥ ಸ್ನಾನ, ಪವಿತ್ರ ಕ್ಷೇತ್ರಗಳ ಸಂದರ್ಶನ ಮಾಡಿರುವರು. ಇಂತಹ ಮಹನೀಯರನ್ನು ನೆನೆದ ದಿನವೇ ಸುದಿನ.

ಅರಣ್ಯಗಳು, ಉಪವನಗಳು, ಪರ್ವತಗಳು, ಜಲಾಶಯಗಳು, ಆನೆಗಳ ಹಿಂಡಿನಿಂದ ಕೂಡಿದ ಗೊಂಡಾರಣ್ಯಗಳು, ಮಧುರವಾದ ಧ್ವನಿ ಮಾಡುವ ಪಕ್ಷಿಗಳಿಂದ ಮತ್ತು ಭ್ರಮರಗಳಿಂದ ಕೂಡಿರುವ ದಿವ್ಯ ಪುಷ್ಕರಣಿಗಳುಳ್ಳಂಥ ಪ್ರದೇಶದಲ್ಲಿರುವ ಪವಿತ್ರ ನದೀ ತೀರಗಳಲ್ಲಿ, ಪುಣ್ಯ ಕ್ಷೇತ್ರಗಳಲ್ಲಿ ಕಶ್ಯಪರ ಸಂತತಿಯಾದ ಅಸುರರು ವಾಸ ಮಾಡುತ್ತಾ ಸಜ್ಜನರನ್ನು ಹಿಂಸಿಸುತ್ತಿರುವಾಗ ಆ ಕ್ಷೇತ್ರ ನಾಮಕ ಪರಮಾತ್ಮನು ತನ್ನ ಪ್ರಿಯಶಿಷ್ಯರಾದ ಯತಿವರೇಣ್ಯರು, ದಾಸವರೇಣ್ಯರು ಅಥವಾ ಪರಮಾತ್ಮನಿಂದಲೋ ಆ ದುಷ್ಟಶಕ್ತಿಗಳನ್ನು ಹತ ಮಾಡಿಸುವನು. ಆಗ ಶಿಷ್ಟರ ಉದ್ಧಾರವಾಗುವುದು. ಕ್ಷೇತ್ರ ತೀರ್ಥ ಸ್ನಾನಾದಿಗಳು ಕ್ಷೇತ್ರ ಪಾಲಕನಾದ ಪರಮಾತ್ಮನ ದರುಶನವಾಗುವುದು. ಪುಣ್ಯ ನದಿಗಳ ಸ್ನಾನದಿಂದ ಧರ್ಮಶ್ರದ್ಧೆ ಹೆಚ್ಚಿ ಅದರಿಂದ ಅಂತಃಕರಣ ಸಿದ್ಧಿಸಿ ಪರಮಾತ್ಮನಲ್ಲಿ ನಿರ್ಮಲವಾದ ಭಕ್ತಿ ಹುಟ್ಟುವದು. ನಿಷ್ಕಾಮದಿಂದ ಪುಣ್ಯ ಕಾರ್ಯಗಳು ಮಾಡುವುದರಲ್ಲಿ ಮನಸ್ಸು ಕೊಡುವುದರಿಂದ ಮೋಕ್ಷ ಮಾರ್ಗಕ್ಕೆ ಸಾಧನ. ಮತ್ತು ಅಪ್ರಾಕೃತನಾದ ಜ್ಞಾನಾತ್ಮಕ ಶರೀರವುಳ್ಳ ಶ್ರೀಹರಿಯು ಧ್ಯಾನ ಪ್ರಸಾದದಿಂದ ಪಾಪ ಪರಿಹಾರ ಪುಣ್ಯಪ್ರಾಪ್ತಿ ಸಿದ್ಧಿಸುವುದು. ಪವಿತ್ರವಾದ ಗಂಗಾದಿ ತೀರ್ಥಗಳ ಸ್ನಾನ ಮುಕ್ತಿಯೋಗ್ಯರಿಗೆ ಅನಿಮಿತ್ತ ಬಂಧುವಾದ ಆ ಪರಮಾತ್ಮನ ಕಥಾಶ್ರವಣ ಮನನಾದಿಗಳಿಂದ ಭಗವಂತನಲ್ಲಿ ದೃಢವಾದ ಸಾತ್ವಿಕವಾದ ಭಕ್ತಿ ಜನಿಸಿ ಮುಕ್ತಿ ದೊರೆಯುವುದು. ಯುಗಧರ್ಮ ಕಲಿಪ್ರೇರಣಾನುಸಾರ ಕಲಿಯುಗದಲ್ಲಿ ಅಸತ್ಯ ಕಲ್ಮಷಚಿತ್ತ ಪಾಪಾಚಾರ ಪಾಪದ್ರವ್ಯೋಪ ಜೀವನ, ಅಲ್ಪಬುದ್ಧಿ, ಅಲ್ಪಾಯುಷ್ಯ ದುಃಖ ದಾರಿದ್ರ ಪೀಡಿತ. ಹೀಗಿದ್ದರೂ ಕಲಿಯುಗದಲ್ಲಿ ತ್ರಿಯುಗಜ್ಞಾನಾನುಸಾರ ವಾಯು ದೇವರು ಮತ್ತು ಬಹುಮಂದಿ ದೇವತೆಗಳು ಅವತರಿಸಿ ಲೋಕ ಕಲ್ಯಾಣ ಮಾಡಿರುವರು. ಕಾಲಚಕ್ರ ತಿರುಗುತ್ತಿರಬೇಕಾದರೆ, ದೊಡ್ಡವರ ಅವತಾರದಿಂದ

ಕಲಿಯುಗವು ಮತ್ತು ಧರ್ಮಯುಗವಾಗಬಹುದು; ಯಾಕೆಂದರೆ ನಾರದರು ಪ್ರಹ್ಲಾದ ರಾಜರು, ಭೃಗು ಋಷಿಗಳು, ಧ್ರುವರಾಜರು, ಸಲ್ಲಾದ ರಾಜರು ಅನೇಕ ವಿಭೂತಿ ಪುರುಷರು ಇನ್ನೂ ಅನೇಕ ದೇವತೆಗಳು ಋಷಿಗಳು ಅವತರಿಸಿದರು.

ವಾಯು ದೇವರೇ ಮಧ್ವರಾಗವತರಿಸಿ ಸರ್ವಮೂಲ ಮೊದಲಾದ ಉತ್ಕೃಷ್ಟ ಗ್ರಂಥಗಳನ್ನು ರಚಿಸಿ ದೊಡ್ಡಬದರಿಯಲ್ಲಿ ಶ್ರೀ ವೇದವ್ಯಾಸರನ್ನು ಸಂದರ್ಶಿಸಿ ಅವರ ಆಜ್ಞಾನುಸಾರ ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯವನ್ನು ರಚಿಸಿ ಲೋಕಕ್ಕೆ ಮಹದೋಪಕಾರವನ್ನು ಮಾಡಿ ಲೋಕಕಲ್ಯಾಣವನ್ನು ಉಂಟು ಮಾಡಿದರು. ಈಗ ಕೆಲವು ಆಧುನಿಕ ಜನರು ಕೇಳುವ ಅಡ್ಡಾದಿಡ್ಡಿ ಪ್ರಶ್ನೆಗಳಿಗೆ ತಾತ್ಪರ್ಯ ನಿರ್ಣಯದಲ್ಲಿ ಸಮಂಜಸವಾದ ಉತ್ತರವೇ ಉಂಟು. ಶ್ರೀ ಮಧ್ವಾಚಾರ್ಯರು ವಿಷ್ಣು ಸರ್ವೋತ್ತಮತ್ವ, ನಿತ್ಯಾವಿಯೋಗಿನಿಯಾದ ಸೀತಾದೇವಿಯ ಚರಿತ್ರೆ, ಪಾಂಚಾಲಿ ಪಂಚಪತಿತ, ಮೊದಲಾದ ಅನೇಕ ವಿಷಯಗಳನ್ನು ಅತಿ ಸುಂದರವಾಗಿ-ಬಿಡಿಸಿ, ಹೇಳಿರುವರು, ಭಾರತ ಉದ್ದಗಲಕ್ಕೆ ತಿರುಗಿ, ತತ್ವವಾದ ಬೆಳಕನ್ನು ನೀಡಿ, ಅದ್ವೈತಿಗಳನ್ನು ಗೆದ್ದು ದ್ವೈತಸಿದ್ಧಾಂತವನ್ನು ಸ್ಥಾಪಿಸಿ, ಉಡುಪಿಯಲ್ಲಿ ಶ್ರೀ ಕೃಷ್ಣ ಪರಮಾತ್ಮನನ್ನು ಪ್ರತಿಷ್ಠಿಸಿದ ಮಹಾನುಭಾವರು. ಶೇಷಾಂಶ, ಮತ್ತು ಇಂದ್ರಾಂಶ ಸಂಭೂತರಾದ ಶ್ರೀ ಜಯತೀರ್ಥರು ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆ ಟಿಪ್ಪಣಿ ಬರೆದು ಟೀಕಾರಾಯರೆಂದು ಪ್ರಸಿದ್ಧಿ ಪಡೆದರು. ಇವರ ಬೃಂದಾವನವು ಮಳಖೇಡದಲ್ಲಿದೆ.

ದೈವಾಂಶ ಸಂಭೂತರಾದ ಶ್ರೀ ಶ್ರೀಪಾದರಾಜರು ಕಲಿಯುಗದಲ್ಲಿ ಕೇವಲ ಭಕ್ತಿಯಿಂದ ಹರಿಧ್ಯಾನ ಮಾಡಿದರೆ ಕೃತ, ತ್ರೇತ, ದ್ವಾಪರಯುಗದ ಯಜ್ಞಯಾಗಾದಿ ತಪಸ್ಸಿನ ಫಲ ದೊರೆಯುವುದೆಂದರು.

ನಾರದಾಂಶ ಸಂಭೂತರಾದ ಪುರಂದರ ದಾಸರು ವ್ಯಾಸರಾಜರು ವಾದಿರಾಜರು ರಘೋತ್ತಮತೀರ್ಥರು, ವಿಜಯೀಂದ್ರರು, ರಾಘವೇಂದ್ರರು, ಸತ್ಯಬೋಧರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಕನಕದಾಸರು ಮೋಹನದಾಸರು, ಮೊದಲಾದ ಅನೇಕ ದಾಸವರೇಣ್ಯರು ಯತಿವರೇಣ್ಯರು ಕಲಿಯುಗದಲ್ಲಿ ಹುಟ್ಟಿ ಲೋಕ ಕಲ್ಯಾಣ ಮಾಡಿರುವರು. ಲೋಕ ಕಲ್ಯಾಣಕ್ಕಾಗಿ ಅವರ ಜೀವನವೇ ಮುಡುಪಾಗಿಟ್ಟಿರುವರು, ಸತ್ಸಂಗ, ಸತ್ಕರ್ಮ ಸಹೃದಯತೆ ಸತ್ಪಾತ್ರದಾನ ಸ್ವಧರ್ಮಾಚರಣೆ ಸತ್‌ಶಾಸ್ತ್ರಪಠನ ಸನಾತನ ಸಂಪ್ರದಾಯ ಇವೇ ಮೊದಲಾದ ಅನೇಕ ಧರ್ಮಗಳು ತಿಳಿಸಿರುವರು.

ಈ ಮಹನೀಯರೆಲ್ಲಾ ಹಾಕಿ ಕೊಟ್ಟ ದಾರಿಯಲ್ಲಿ ವರ್ತಿಸಿ ಶಾಸ್ತ್ರಾರ್ಥ ಕ್ರಮಬದ್ಧವಾಗಿ ನಡೆದುಕೊಂಡು, ಪವಿತ್ರ ನದಿಗಳ ಸ್ನಾನ, ಪುಣ್ಯಕ್ಷೇತ್ರಗಳ ವೀಕ್ಷಣ ಕ್ಷೇತ್ರ ನಾಮಕ ಪರಮಾತ್ಮನ ದರುಶನ, ಅರ್ಚನ ಧ್ಯಾನಗಳಿಂದ ಮತ್ತು ದಾನಧರ್ಮ ಪರೋಪಕಾರಬುದ್ಧಿ, ಪಿತೃಕಾರ್ಯಾಚರಣ ಸತ್ಕರ್ಮಾಚರಣೆ ನಿಷ್ಕಾಮಕರ್ಮ ಇವೇ ಮೊದಲಾದವುಗಳಿಂದ ಮೋಕ್ಷಮಾರ್ಗಕ್ಕೆ ಸಾಧನೆ ಆಗುವುದು. ಆರ್ಥಿಕ ದಾರಿದ್ರವಿದ್ದರು ಧಾರ್ಮಿಕ ಶ್ರೀಮಂತಿಕೆ ಇರುವದು ಅಪರೂಪ. ಲೌಕಿಕ ಧನ ನಶ್ವರ, ಜ್ಞಾನಧನ ಶಾಶ್ವತ, ಇದರಿಂದ ಮುಕ್ತಿಗೆ ಸಾಧನವಾಗುವದು.

"ಸ್ನಾನವ ಮಾಡಿರೋ ಜ್ಞಾನ ಸಮುದ್ರದಿ। ನಾನು ನೀನೆಂಬ ಅಹಂಕಾರವ ಬಿಟ್ಟು, ವೇದಶಾಸ್ತ್ರವನೋದುವದೊಂದು ಸ್ನಾನ, ಭೇದಾ ಬೇಧವ ತಿಳಿದರೊಂದು ಸ್ನಾನ, ಸಾಧು ಸಜ್ಜನರ ಸಂಗ ಒಂದು ಸ್ನಾನ, ಪುರಂದರ ವಿಠಲನ ಧ್ಯಾನವೇ ಗಂಗಾಸ್ನಾನ" ಇನ್ನು ಪಾತ್ರರ ಸಂಗಡ ಯಾತ್ರೆಯ ಮಾಡು ಅಂತಾರೆ ದಾಸರು. ಕೇವಲ ಊಟ ನೋಟ ಅನಾಚಾರ ಹಾಳು ಹರಟೆಯಿಂದ ಕಾಲ ಕಳೆಯುತ್ತಾ ಯಾತ್ರೆ ಮಾಡಬಾರದು.

ಯಾವ ಕ್ಷೇತ್ರಕ್ಕೆ ಹೋದರೂ ಆಯಾ ತೀರ್ಥ ಕ್ಷೇತ್ರಗಳ ಮಹಿಮೆ, ಸ್ಥಳ ಮಹಾತ್ಮೆ ಕಾಲ ದೇಶ ಪರಿಸ್ಥಿತಿ ಸ್ಥಳ ಇವೆಲ್ಲಾ ನೆನಪಿನಲ್ಲಿಟ್ಟುಕೋಳ್ಳಬೇಕು.

ಪ್ರಾತಃಸ್ನಾನ ಮಾಡುವಾಗ, ಶೌಚ ವಿಧಿಯನ್ನು ಮುಗಿಸಿ ನದಿ ಅಭಿಮಾನಿ ದೇವತೆಗಳನ್ನು ಪ್ರಾರ್ಥಿಸಿ ನದಿ ದಡದಲ್ಲಿ ಕುಳಿತುಕೊಂಡು ಸ್ನಾನ ಸಂಕಲ್ಪವನ್ನು ಹೇಳಿ ಸ್ತ್ರೀಯರಿಗೆ ಸಂಕಲ್ಪ : (ಸಂಕ್ಷೇಪ) ಶ್ರೀ ಗುರುಭ್ಯೋನಮಃ ತೀರ್ಥರಾಜಾಯನಮಃ ಎಂದು ಪ್ರಾರ್ಥಿಸಿ ಸ್ನಾನ ಮಾಡಿ ಆಚಮನ ಮಾಡಿ ಶುಭೇಶೋಭನೇ ಮುಹೂರ್ತೇ- ವಿಷ್ಣೋೀರಾಜ್ಞಯ ಪ್ರವರ್ತಮಾನಶ್ಯ ಆದ್ಯ ಬ್ರಹ್ಮಣಃ ದ್ವಿತೀಯ ಪರಾರ್ತೇ- ಶ್ವೇತವರಾಹ ಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಮೇರೋರ್ ದಕ್ಷಿಣಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯೇ ದಕ್ಷಿಣೇತೀರೇ ಶಾಲಿವಾಹನಶಕೆ ಬೌದ್ಧಾವತಾರೇ ರಾಮ ಕ್ಷೇತ್ರೇ ಅಸ್ಮಿನ್ ವರ್ತಮಾನೆ ಚಾಂದ್ರ ಮಾನೇನ........ ನಾಮ ಸಂವತ್ಸರೇ.......... ಆಯನೇ ........ ಋತೌ..........ಮಾಸೇ............ ಪಕ್ಷೇ............... ತಿಥೌ ............ ವಾಸರಯುಕ್ತಾಯಾಂ ಶುಭ ನಕ್ಷತ್ರ ಶುಭಯೋಗ ಶುಭಕರ್ಣ ಏವಂಗುಣ ವಿಶೇಷಣ ವಿಶಿಷ್ಠಾಯಾಂ ಶುಭತಿಥೌ ಪತ್ಯಂತರ್ಗತ ಅಸ್ಮದಾದಿ ಗುರೂಣಾಂ ಶ್ರೀ

ಮನ್ಮಧ್ವಾಚಾರ್ಯಾಣಾಂ ಹೃತ್ಕಮಲ ಮಧ್ಯನಿವಾಸಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಚತುರ್ಮೂರ್ತ್ಯಾ ದ್ಯನಂತಾವರಾತ್ಮಕ ಶ್ರೀ ನಿರ್ದೋಷಾನಂತ ಕಲ್ಯಾಣ ಗುಣ ಪೂರ್ಣ ಕ್ಷೀರಾಬ್ಧಿ ಶಾಯಿ (ಶ್ರೀ ಲಕ್ಷ್ಮೀನಾರಾಯಣಾತ್ಮಕ ಶ್ರೀವಾಸ ನಿಯಾಮಕ........ ಆತ್ಮತ್ರಸ್ತ್ಯಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ) ಶ್ರೀ ಲಕ್ಷ್ಮೀ ನಾರಾಯಣ ಪ್ರೀತ್ಯರ್ಥಂ. ಹರಿಸರ್ವೋತ್ತಮತ್ವ ಜ್ಞಾನ ಭಕ್ತಿ ವೈರಾಗ್ಯ ಸಿದ್ಧ್ಯರ್ಥಂ ಅಂತಃಕರಣ ಶುದ್ಧ್ಯರ್ಥ್ಯಂ ಶರೀರ ಶುದ್ಧ್ಯರ್ಥ ಜ್ಞಾತಾ ಜ್ಞಾತಾ ದೋಷ ಪರಿಹಾರಾರ್ಥಂಚ ಅಶ್ವತ್ಥನಾರಾಯಣ ತುಲಸೀ ವಿಷ್ಣು ವೈಷ್ಣವ ಸನ್ನಿಧೌ ಭಾಗೀರಥ್ಯಾದಿ ಸಾರ್ವ ತ್ರಿಕೋಟಿ ತೀರ್ಥಾಭಿಮಾನಿ ದೇವತಾ ಸನ್ನಿಧೌ ಅಸ್ಮಿನ್ ...... ಗಂಗಾಜಲಾಶಯೇ ಪ್ರಾತಃ ಸ್ನಾನಮಹಂಕರಿಷ್ಯೇ ಎಂದು ಸಂಕಲ್ಪ ಪೂರ್ವಕವಾಗಿ ಸ್ನಾನ ಮಾಡಿ ಅರ್ಘ್ಯವನ್ನು ಕೊಡತಕ್ಕದ್ದು. ಸ್ನಾನ ಮಾಡುವಾಗ ಎಲ್ಲಾ ಪುಣ್ಯ ನದಿಗಳ ಹೆಸರು ಉಚ್ಚರಿಸಿ ಕೊನೆಗೆ ಜಯ ಗಂಗೆ ಮಂಗಳ ತರಂಗೆ ಎಂದು ಹೇಳಿ ಪುನಃ ಸ್ನಾನ ಮಾಡಿ ಅರ್ಘ್ಯ ಕೊಡತಕ್ಕದು. ಗಂಗಾಶಬ್ದವೇ ಪವಿತ್ರವಾದದ್ದು, ಪೂರ್ವಕ್ಕೆ ಬಚ್ಚಲು ಮನೆಗಳಲ್ಲಿ ಗಂಗಾಳವನ್ನು ಸ್ನಾನಕ್ಕೆ ಇಡುತ್ತಿದ್ದರು, ಬಾಯಿಗೆ ಗಂಗಾಶಬ್ದ ಬರಲಿ ಎಂದು ಈಗ ಪ್ಲಾಸ್ಟಿಕ್ ಬಕೆಟುಗಳು ಉಪಯೋಗಿಸುವರು.

ಗಂಗಾ ಸ್ಮರಣ, ಗಾಯತ್ರಿವುಚ್ಚರಣ, ಗೀತ ಪಠನ ಗೋವಿಂದನಸ್ಮರಣ ಗೋಸೇವನ ಈ ಐದು ಪಂಚರತ್ನಗಳು ಹಾಗೆ ಪವಿತ್ರವಾದದ್ದು. ಇದರಿಂದ ಪಾಪಹರಣ ಪುಣ್ಯ ಪ್ರಾಪ್ತಿ ಆಗುವದು.

**''ಗಂಗಾ ಗಂಗೆತಿಯೋ ಬ್ರೂಯಾತ್ | ಯೋಜನಾಂ ಶತೈರಪಿಃ**
**ಮುಚ್ಚತೇ ಸರ್ವಪಾಪೇಭ್ಯೋ ವಿಷ್ಣು ಲೋಕಂ ಸದ್ರಚ್ಚತ್ತಿ ||''**

ವಿಷ್ಣುವಿಗೆ, ಸೂರ್ಯನಿಗೆ, ವರುಣ ಗಂಗೆಗೆ ಕಾವೇರಿಗೆ ಅರ್ಘ್ಯವನ್ನು ಕೊಟ್ಟ ನಂತರ ಸದ್ಯಂತರ್ಗತ ತೀರ್ಥಾಂತರ್ಗತ ತತ್ರದ್ರೂಪಿ ಶ್ರೀ ನಾರಾಯಣನಮಃ ಎಂದು ಅರ್ಘ್ಯ ಬಿಡಬೇಕು. ನಂತರ ಬ್ರಹ್ಮಾದಿ ದೇವತೆಗಳಿಗೆ ಮಧ್ವ ಸರೋವರಕ್ಕೆ ಬಿಟ್ಟು ವೆಂಕಟಾಚಲ ಸಂಭೂತೇ,

**''ಸರ್ವತೀರ್ಥಸಮನ್ವಿತೇ ಸ್ವಾಮಿ ಪುಷ್ಕರಣಿ ಖ್ಯಾತೇ ಗೃಹಾಣಾರ್ಘ್ಯಂ**
**ನಮೋಸ್ತುತೇ. ಎಂದು ತೀರ್ಥರಾಜ ಆದ ಸ್ವಾಮಿ ಪುಷ್ಕರಿಣಿಗೆ**
**ಅರ್ಘ್ಯ ಕೊಡತಕ್ಕದ್ದು.''**

ನದೀ ದಡದಲ್ಲಿ ರೇಷ್ಮೇ ಸೀರೆ ಉಟ್ಟು ಕುಳಿತುಕೊಂಡು ಗದಿನಾರಾಯಣ

ಮುದ್ರೆ ಹಚ್ಚಿಕೊಂಡು ಕ್ಮಂಕುಮ ತಿಲಕವನ್ನು ಹಚ್ಚಿಕೊಂಡು 24 ಕೇಶವ ನಾಮ ಕೇಶವಾಯಸ್ವಾಹ, ನಾರಾಯಣಾಯಸ್ವಾಹ, ಮಾಧವಾಯಸ್ವಾಹ, ಗೋವಿಂದಾಯ ನಮಃ ವಿಷ್ಣವೇನಮಃ, ಮದುಸೂಧನಾಯನಮಃ, ತ್ರಿವಿಕ್ರಮಾಯನಮಃ, ವಾಮನಾಯನಮಃ, ಶ್ರೀಧರಾಯನಮಃ, ಹೃಷೀಕೇಶಾಯನಮಃ, ಪದ್ಮಾನಾಭಾಯ ನಮಃ, ದಾಮೋದರಾಯನಮಃ, ಸಂಕರ್ಷಣಾಯನಮಃ ವಾಸುದೇವಾಯನಮಃ, ಪ್ರದ್ಯುಮ್ನಾಯನಮಃ, ಅನಿರುದ್ಧಾಯನಮಃ, ಪುರುಷೋತ್ತಮಾಯನಮಃ ಅದೋಕ್ಷಜಾಯನಮಃ, ನಾರಸಿಂಹಾಯನಮಃ ಅಚ್ಯುತಾಯನಮಃ, ಜನಾರ್ಧನಾಯನಮಃ, ಉಪೇಂದ್ರಾಯನಮಃ, ಹರಿಯೇನಮಃ, ಶ್ರೀ ಕೃಷ್ಣಾಯನಮಃ ಎಂದು ಹೇಳಿಕೊಂಡು ಆಚಮನ ಮೂರು ಸಲ ಮಾಡಿ 12 ಗುರುವಂದನ ಮಾಡಿ ಶ್ರೀ ಗುರುಭ್ಯೋನಮಃ, ಶ್ರೀ ಪರಮಗುರುಭ್ಯೋನಮಃ, ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯಭ್ಯೋನಮಃ, ಶ್ರೀ ವೇದವ್ಯಾಸಾಯ ನಮಃ, ಶ್ರೀ ಭಾರತ್ಯೇನಮಃ ಶ್ರೀ ಸರಸತ್ಯೆನಮಃ, ಶ್ರೀ ವಾಯುವೇನಮಃ, ಶ್ರೀ ಬ್ರಹ್ಮಣೇನಮಃ ಶ್ರೀ ಲಕ್ಷ್ಮೀನಮಃ ಶ್ರೀ ನಾರಾಯಣಾಯನಮಃ, ಶ್ರೀ ಕೃಷ್ಣಾಯನಮಃ, ಶ್ರೀವಾಸುದೇವಾಯನಮಃ, ಶ್ರೀ (ಹೃತ್ಕಂಮಲಸ್ಥಿತ ಪರಮಾತ್ಮಾ ಸುಷುಮ್ನಾ ಮಾರ್ಗೇಣ ಮಾರ್ಧ್ನಿನ್ಯ ಸೀತೆ) ಗುರುವಂದನ ಮಾಡಿ ಶ್ರೀ ಕೃಷ್ಣ ಷಡಕ್ಷರ ಮಂತ್ರವನ್ನು ಶ್ರೀಂ ಕ್ಲಿಂ ಕೃಷ್ಣಾಯನಮಃ ಶ್ರೀಂ ಎಂದು ಬೆರಳ ಎಣಿಸಿ 108 ಸಲ ಜಪಿಸತಕ್ಕದ್ದು. ಮುಂದಿನ ಪೀಳಿಗೆಯ ಹುಡುಗಿಯರಿಗೆ ಇಷ್ಟು ಮಾತ್ರ ಹೇಳಿ ಕೊಂಡರೆ ಸಾಕೆಂದೆನಿಸುವುದು. ನಂತರ ಸ್ವಚ್ಛವಾದ ಸ್ಥಳದಲ್ಲಿ ನದೀ ದಡದಲ್ಲಿ ಮರಳಿನಿಂದ ಸಣ್ಣದಾಗಿ ಐದು ಭಾಗವನ್ನು ಮಾಡಿಕೊಂಡು ಅರಿಷಿಣ ಕುಂಕುಮ ಗೆಜ್ಜೆವಸ್ತ್ರ ಪುಷ್ಪದಿಂದ ಆ ಮರಳು ಗೌರಮ್ಮನಿಗೆ ಪೂಜಿಸತಕ್ಕದ್ದು. ಈಕೆ ಮಾಂಗಲ್ಯಾಭಿಮಾನಿಯಾದ (ಪಾರ್ವತಿ) ಮಂಗಳ ಗೌರಿ, ಪಾರ್ವತಿ ಮಂತ್ರ.

**''ಉಮಾಕಾತ್ಯಾಯನಿ ಗೌರಿ ಕಾಳೀ ಹೈಮವತೇಶ್ವರಿ ಶಿವಾ**
**ಭವಾನಿ ರುದ್ರಾಣಿ ಶರ್ವಾಣಿ ಸರ್ವಮಂಗಳ. ಅಪರ್ಣಾ ಪಾರ್ವತಿ**
**ದುರ್ಗಾ ಮೃಡಾಲಿನಿ ಚಂಡಿಕಾಂಬಿಕೆ ನಮಃ''**

ನಂತರ ತುಳಸಿ ಮಂತ್ರವನ್ನು ಹೇಳಿಕೊಂಡು ತುಳಸಿ ಪೂಜೆ ಮಾಡಿಕೊಳ್ಳಬೇಕು.

## ತುಳಸಿ ಸ್ತೋತ್ರ :

**ಶ್ರೀಯಂಪ್ರಿಯೇಶ್ರಿಯಾವಾಸ ನಿತ್ಯಂ ಶ್ರೀಧರವಲ್ಲಭೇ**
**ಭಕ್ತ್ಯಾದತ್ತಂ ಮಮಾರ್ಷಂ ಹೇ ತುಲಸಿ ಪ್ರತಿಗೃಹ್ಯತಾಂ ||**

ನಂತರ ಗೌರಿ ಪೆಟ್ಟಿಗೆಯಲ್ಲಿರುವ ಸಣ್ಣ ಲಕ್ಷ್ಮೀನಾರಾಯಣರ ವಿಗ್ರಹವನ್ನು ಪೂಜಿಸಿ ನಂತರ ಆ ಕ್ಷೇತ್ರ ನಾಮಕ ಪರಮಾತ್ಮನ ದೇವಸ್ಥಾನಕ್ಕೆ ಹೋಗಿ ದರುಶನ ಮಾಡಿಕೊಂಡು, ಅರ್ಚನೆ, ಆರತಿ, ಪ್ರದಕ್ಷಿಣೆ, ನಮಸ್ಕಾರವನ್ನು ಮಾಡಿ ಪ್ರಸಾದ ಸ್ವೀಕರಿಸಬೇಕು. ನದಿ ಸ್ನಾನಕ್ಕೆ ಹೊರಡುವಾಗ ನಿತ್ಯ ಗೌರಿ ಪೆಟ್ಟಿಗೆ ಪೂಜಾದಿ ದ್ರವ್ಯಗಳು ತೆಗೆದುಕೊಂಡು ಹೋಗುವುದನ್ನು ಮರೆಯಬಾರದು.

## "ಲಕ್ಷ್ಮೀ ಸ್ತೋತ್ರ"

1. ನಮಸ್ತೇಸ್ತು ಮಹಾಮಾಯೆ ಶ್ರೀ ಪೀಠೇ ಸುರಪೂಜಿತೇ।
   ಶಂಖ ಚಕ್ರ ಗದಾ ಹಸ್ತೆ। ಮಹಾಲಕ್ಷ್ಮೀ ನಮೋಸ್ತುತೇ ॥

2. ನಮಸ್ತೇ ಗರುಡಾರೂಢೆ। ಕೋಲಾಸುರ ಭಯಂಕರಿ।
   ಸರ್ವಪಾಪ ಹರೇ ದೇವಿ। ಮಹಾಲಕ್ಷ್ಮೀ ನಮೋಸ್ತುತೇ ॥

3. ಸರ್ವಜ್ಞೇ ಸರ್ವವರದೆ। ಸರ್ವ ದುಷ್ಟ ಭಯಂಕರೀ।
   ಸರ್ವ ದುಃಖ ಹರೇದೇವಿ। ಮಹಾಲಕ್ಷ್ಮೀ ನಮೋಸ್ತುತೇ ॥

4. ಸಿದ್ಧಿ ಬುದ್ಧಿ ಪ್ರದೇದೇವಿ। ಭಕ್ತಿ ಮುಕ್ತಿ ಪ್ರದಾಯನಿ।
   ಮಂತ್ರ ಮೂರ್ತೇ ಸದಾ ದೇವಿ। ಮಹಾಲಕ್ಷ್ಮೀ ನಮೋಸ್ತುತೇ ॥

5. ಆದ್ಯಾಂತ ರಹಿತೇ ದೇವಿ। ಆದಿಶಕ್ತಿ ಮಹೇಶ್ವರಿ ॥
   ಯೋಗಜ್ಞೇ ಯೋಗ ಸಂಭೂತೇ। ಮಹಾಲಕ್ಷ್ಮಿ ನಮೋಸ್ತುತೇ ॥

6. ಸ್ಥೂಲಸೂಕ್ಷ್ಮೇ ಮಹಾರೌದ್ರೆ। ಮಹಾಶಕ್ತಿ ಮಹೋದರಿ।
   ಮಹಾಪಾಪ ಹರೇ ದೇವಿ। ಮಹಾಲಕ್ಷ್ಮೀ ನಮೋಸ್ತುತೇ ॥

7. ಪದ್ಮಾಸನಸ್ಥಿತೇ ದೇವಿ। ಪರಬ್ರಹ್ಮಸ್ವರೂಪಿಣಿ ॥
   ಪರಮೇಶಿ ಜಗನ್ಮಾತ। ಮಹಾಲಕ್ಷ್ಮೀ ನಮೋಸ್ತುತೇ ॥

8. ಶ್ವೇತಾಂಬರ ಧರೇದೇವಿ। ನಾನಾಲಂಕಾರ ಭೂಷಿತೇ।
   ಜಗಸ್ಥಿತೇ ಜಗನ್ಮಾತಾ। ಮಹಾಲಕ್ಷ್ಮೀ ನಮೋಸ್ತುತೇ ॥

9. ಮಹಾಲಕ್ಷ್ಮೀ ಅಷ್ಟಕಂ ಸ್ತೋತ್ರಂ। ಯಃ ಪಠೇದ್ಭಕ್ತಿಮಾನ್ನರಃ॥
ಸರ್ವಸಿದ್ಧಿ ಮವಾಪ್ನೋತಿ। ರಾಜ್ಯ ಪ್ರಾಪ್ನೋತಿ ಸರ್ವದಾ॥
ಏಕಕಾಲೇ ಪಠೇ ನಿತ್ಯಂ। ಮಹಾಪಾಪ ವಿನಾಶನಂ।
ದ್ವಿಕಾಲೆಯಃ ಪಠೇ ನಿತ್ಯಂ। ಧನಧಾನ್ಯ ಸಮನ್ವಿತಂ
ತ್ರಿಕಾಲೇ ಪಠೇ ನಿತ್ಯಂ। ಮಹಾಶತ್ರು ವಿನಾಶನಂ।
ಮಹಾಲಕ್ಷ್ಮೀ ಸ್ಮರೇನಿತ್ಯಂ। ಪ್ರಸನ್ನಾವರದಾ ಶುಭ॥
"ಇತಿ ಸಂಪೂರ್ಣಂ ಕೃಷ್ಣಾರ್ಪಣಂ॥

## ಲಕ್ಷ್ಮೀ ಸ್ತೋತ್ರ :

ಲಕ್ಷ್ಮೀ ಪದ್ಮಾಲಯಾ ಪದ್ಮಕಮಲಾ ಶ್ರೀಹರಿಪ್ರಿಯೇ।
ಇಂದಿರಾ ಲೋಕಮಾತ ರಮಾಮಂಗಳ ದೇವತಾ।
ಭಾರ್ಗವೀ ಲೋಕ ಜನನಿ ಕ್ಷೀರಸಾಗರ ಕನ್ನಿಕೆ.
ಶಂಖೋ ಲಕ್ಷ್ಮೀಪತಿ ಪಾಂಚಜನ್ಯಶ್ಚಕ್ರಂ ಸುದರ್ಶನಂ॥

ಕರ್ಮ ಮಾರ್ಗವೇ ಜ್ಞಾನ ಮಾರ್ಗದ ಮೊದಲನೆಯ ಮೆಟ್ಟಿಲು, ಭಗವಂತನಲ್ಲಿ ಭಕ್ತಿ, ಸೇವೆಯಲ್ಲಿ ನಿರ್ಮಲ ಭಕ್ತಿ ಹುಟ್ಟುವದಕ್ಕೆ ಸತ್ಕರ್ಮಗಳನ್ನು ಆಚರಿಸುತ್ತಿರಬೇಕೆಂಬುವದು ಎಲ್ಲಾ ಆಸ್ತಿಕರಿಗೆ ತಿಳಿದ ಮಾತು.

ಪುರುಷರು ಸಹ ಸ್ನಾನ ಸಂಧ್ಯಾ ದೇವರ ಪೂಜಾದಿಗಳು ಬ್ರಹ್ಮಯಜ್ಞ ಇತ್ಯಾದಿಗಳು ಮಾಡಿಕೊಳ್ಳಬೇಕು. ಪರಸ್ಥಳಗಳಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಲೇ ಬೇಕು. ಏಕಾದಶೀ ಉಪವಾಸ, ಚಾತುರ್ಮಾಸ್ಯಾದಿ ವ್ರತ ಕೃಷ್ಣ ಜಯಂತಿ ಉಪವಾಸ ಮಾಡಲೇ ಬೇಕು. ಶೂದ್ರಾನ್ನ ನೀರು ಸ್ವೀಕರಿಸಬಾರದು. ಶುಚಿ ಶುಭ್ರ ಮಡಿಯಾಗಿ ಅಡಿಗೆ ದೇವರ ನೈವೇದ್ಯ ವೈಶ್ವದೇವ ಮಾಡಿದ ಊಟ ಮಾಡತಕ್ಕದ್ದು. ಯಾತ್ರಾ ಸ್ಥಳಗಳಲ್ಲಿ ಪುರಾಣ ಪಾಠ ಪ್ರವಚನಾದಿಗಳು, ತಾರತಮ್ಯೋಕ್ತ ಭಜನಾದಿಗಳು ಮಾಡತಕ್ಕದ್ದು ; ಸಂಪ್ರದಾಯವಾಗಿದೆ. ಸುತ್ತಮುತ್ತಲಿರುವ ಪವಿತ್ರ ಸ್ಥಳಗಳ ನೋಟ ಪರಮಾತ್ಮನ ನಾಮಸಂಕೀರ್ತನ ಮಾಡತಕ್ಕದ್ದು. ಹಿಂದಿನ ಕಾಲದಲ್ಲಿ ಹರಿದಾಸರು ತಮ್ಮ ಸ್ವಸ್ಥಳಗಳಿಂದ ಪರಿವಾರ ಶಿಷ್ಯ ಸಂಪತ್ತಿನೊಡನೆ ಕೂಡಿಕೊಂಡು ಪ್ರತಿವರ್ಷ ಶ್ರೀ ವೆಂಕಟೇಶನ ಬ್ರಹ್ಮೋತ್ಸವಕ್ಕೆ ಕಾಲ್ನಡಿಗೆಯಿಂದ ಹೋಗುತ್ತಿದ್ದರು. ತಿರುಪತಿ

ಸೇರಿ ಅಲ್ಲಿ ಕಪಿಲ ತೀರ್ಥದಲ್ಲಿ ಮಿಂದು ಬೆಟ್ಟವನ್ನು ನಡೆದು ಹತ್ತುತ್ತಿದ್ದರು. ಬೆಟ್ಟದ ಮೇಲೆ ತೀರ್ಥರಾಜನಾದ ಸ್ವಾಮಿ ಪುಷ್ಕರಿಣಿಯಲ್ಲಿ ಮಿಂದು ಆ ವೆಂಕಟೇಶನ ದಿವ್ಯ ಮಂಗಳ ವಿಗ್ರಹವನ್ನು ನೋಡಿ ಆನಂದ ಸಂಭ್ರಮ ಪಡುತ್ತಿದ್ದರು.

ಅನೇಕ ಭಕ್ತಾದಿಗಳು ಎಲ್ಲಾ ಜಾತಿಯವರು ವೆಂಕಟೇಶನ ಮೇಲೆ ಭಕ್ತಿಗೀತೆಗಳನ್ನು ಹೇಳಿಕೊಳ್ಳುತ್ತಾ ಬೆಟ್ಟವನ್ನು ಕಾಲ್ನಡಿಗೆಯಿಂದ ಹತ್ತುವರು, ಗೋವಿಂದಾ ಗೋವಿಂದಾ ಎಂಬ ಶಬ್ದವು ಕರ್ಣಾನಂದವಾಗಿರುತ್ತದೆ,

## ಭಕ್ತಿ ಗೀತೆ

ಭಕ್ತುಲಪಾರಿದೇವುಡಾ ಶ್ರೀವೆಂಕಟೇಶ। ಭಕ್ತವತ್ಸಲ ಡೌರ್ಲಾ ಏಡೂಕೊಂಡಲವಾಡ
ವುಮ್ಮೇಲು ಕೋರಾ
ಮತ್ಸ್ಯಾವತಾರಮುನ ತುಚ್ಛ್ಯದೈತುನಿಚಂಪಿ ಸ್ವಚ್ಛವೇದಮುಲ ಜುನ ಕಿಚ್ಚಿನ ದೇವುಡು ॥
ಕೂರ್ಮಾವರ ಮನ ಕೊಂಡವಿಪುನಮೋಸಿ ದಂಡಿಗ ಅಮೃತ ಮು
ದೇವತುಲಕಿಚ್ಚಿನಾವು ॥
ವರಹವತಾರಮುನ ಎತ್ತಿ ಕೊಮ್ಮುಲಧರಣಿ ತುಚ್ಛದೈತ್ಯುನಿ ಚಂಪಿನ ಶ್ರೀವೆಂಕಟೇಶ ॥
ನರಸಿಂಹವತಾರಮುನ ವೆಲಸಿ ಬಾಲುನಿಗಾಚಿ, ಕನಕ ಕಶ್ಯಪ ಗೋಟ ಬೇವಿನ ಸ್ವಾಮಿ ॥
ವಡುಗವೈ ಬಲಿನಿ ಮೂಡುಗುಲುವೇಡಿ ಬಂಧಿಂಚಿಪಾತಾಳ ಕದಮಿನ ದೇವುಡ ॥
ಪರಶುರಾಮುಡ ವೈದುಷ್ಟಕ್ಷತ್ರಿಯಲನೆಲ್ಲ, ಶಿರಮುಲುದ್ರುಂಚಿನ ಭಾರ್ಗವರಾಮ ॥
ರಾಮಾವತಾರಮುನ ರಾತಿನಾತಿಗಜೇಸಿ, ರಾವಣುನಿ ಚಂಪಿನಾವುರಾ ಪ್ರಜಲ ಕೊರಿಕು ॥
ಭಕ್ತಲು ವ್ರೇಪಲ್ಲೆಲೋ ಬುಟ್ಟಿ ಗೋಪಿಕಲ ಇಂಡ್ಲ ವೆನ್ನಮಿಾಗಡ ತಿನ್ನ ಚಿನ್ನಿ
ಗೋಪಾಲಕೃಷ್ಣ ॥ ಭಕ್ತುಲಪಾಲಿದೇವುಡು ॥
ಬುದ್ಧಾವತಾರಮುನ ತ್ರಿಪುರಲುಹತಯಾರ್ಚ, ಬುದ್ದುಲು ಜರಿಪಿನ ಬೌದ್ಧವರಾಮ ॥
ಕವಿಯುಗಮಂದು ಕವಿವೈ ಅವತರಿಂಚಿ ದುಷ್ಟುಲಸಿಕ್ಷಿಂಚಿ ಶಿಷ್ಟುಲು ಪಾಚ್ರೋತುವು ॥
ಕಪಿಲಾಖ್ಯವೆಂಕಟೇಶ ಸಕಲ ಲೋಕ ಮುಲೆಲ್ಲ, ಉದ್ಧರಿಂಚಿ ಕರುಣೆಂಬೆ ಮುಮ್ಮೇಲು ॥
ಭಕ್ತುಲ ಪ್ಪಾಲಿದೇವುಡ ಶ್ರೀವೆಂಕಟೇಶ, ಭಕ್ತ ವತ್ಸಲುಡೌರಾ ॥

## ತಿರುಪತಿ

ಈಗಲೂ ಅಸಂಖ್ಯ ಭಕ್ತರು 'ತಿರುಪತಿಗೆ ಹೋಗಿ ಸ್ವಾಮಿ ಪುಷ್ಕರಣಿಯಲ್ಲಿ

ಹಿಂದು' ವೆಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ, ಎಂಬ ಆ ಸಾವಿರ ನಾಮದೊಡೆಯನಾದ ಮತ್ತು ಭೂವೈಕುಂಠಾಧಿಪನಾದ ಶ್ರೀ ವೆಂಕಟೇಶನ ದರುಶನ ಪಡೆಯುವರು. ಯಾತ್ರಿಕರು ದೇವರದರುಶನಕ್ಕೆ ಪೋದಾಗ ಮೊದಲು ಪರಿಸತಕ್ಕ ಮಂತ್ರ.

## ಧೂಳಿ ದರುಶನ

ಧೂಳಿ ದರ್ಶನಂ ದುಃಖನಾಶನಂ। ಪಾದದರುಶನಂ ಪಾಪ ನಾಶನಂ
ಶಿಖರದರ್ಶನಂ ಚಿಂತನಾಶನಂ। ಕಟಿದರ್ಶನಂ ಕರ್ಮನಾಶನಂ
ಕಂಠದರ್ಶನಂ ವೈಕುಂಠ ಸಾಧನಂ। ಮುಖದರ್ಶನಂ ಮುಕ್ತಿದಾಯಕಂ।
ಕಿರೀಟದರ್ಶನಂ ಕೀರ್ತಿದಾಯಕಂ। ಸರ್ವಾಂಗ ದರ್ಶನಂ
ಸರ್ವಪಾಪ ವಿಮೋಚನಂ। ಮಾಲಾಭೂತಮಲಾಕಾಂತಾ
ಶ್ರೀಕಾಂತ ಜನಾರ್ಧನ। ಪಾದದಲ್ಲಿ ಹುಟ್ಟಿರುವಂಥ ಭಾಗಿರಥೀ
ದೇವಿಯ ಕಂಡೆ। ಬ್ರಹ್ಮಾಂಡವು ಧರಿಸಿದಂಥ ಬ್ರಹ್ಮ
ಉದರವ ಕಂಡೆ। ಬ್ರಹ್ಮದೇವರ ಪುಟ್ಟಿದಂಥ ನಾಭಿ
ಕಮಲವುಕಂಡೆ। ವುಟ್ಟವುದಗಿಯ ಕಂಡೆ, ತೊಟ್ಟ ತೊಡಗಿ
ಯ ಕಂಡೆ ಮುತ್ತಿನಹಾರವು ಕಂಡೆ ಎಡಬಲದಲ್ಲಿ
ಶ್ರೀ ಭೂದುರ್ಗಿಯರು ಪಾದ ವತ್ತುವದು ಕಂಡೆ। ಗರುಡ
ಮುಖ್ಯಪ್ರಾಣರು ಕೈ ಮುಗಿದು ನಿಂತಿರುವದು ಕಂಡೆ। ಸರಸ್ವತಿ
ಭಾರತಿಯರು ಚಾಮರ ಬೀಸವದು ಕಂಡೆ
ತುಂಬುರು ನಾರದರು ಗಾನ ಮಾಡುವದು
ಕಂಡೆ। ಕಂಡೆನೋ ಕರುಣಾಕರನ ಕಂಡೆನೋ ಪುಂಡರೀಕಾಕ್ಷನ
ಕಂಡು ಧನ್ಯನಾದೆ ಶ್ರೀ ಪುರಂದರವಿಠಲನ॥
ಅಂದಿದ್ದಾರೆ ದಾಸರು।

ಕಾಂಚನ ಬ್ರಹ್ಮನಾದ ವೆಂಕಟೇಶನಿಗೆ ಭೂ ವೈಕುಂಠಾದಿಪ ಎಂದು ಹೆಸರು. ಮೊದಲು ವರಾಹ ದೇವರ ದರುಶನ ಪಡೆದ ನಂತರ ವೆಂಕಟೇಶನ ದರ್ಶನ ಮಾಡತಕ್ಕದ್ದು.

## ಧ್ಯಾನವ ಮಾಡು ವೆಂಕಟೇಶನ ವಿಶ್ವಪಾದವ

"ಕಾನಡ ರಾಗ - ಆದಿತಾಳ"

1. ಧ್ಯಾನವ ಮಾಡು ವೆಂಕಟೇಶನ ವಿಶ್ವಪಾದವ।
ಸ್ಮರಣೆಮಾಡು ಶ್ರೀನಿವಾಸನ ವಿರಾಟ್‌ಪಾದವ॥
ವೃಷಭಾದ್ರಿ, ಗರುಡಾದ್ರಿ, ಶೇಷಾದ್ರಿಲಿ
ಅಂಜನಾದ್ರಿ ವೆಂಕಟಾದ್ರಿಲಿ ನಿಂತ ಪಾದವ॥

2. ವಿರಜಾನದಿಯು ತಟದ ಮೇಲೆ ನೆಲ್ಸಿದಪಾದವ
ವರಹದೇವರಿಂದೆ ಸ್ಥಳವ ಗಳಸಿದಪಾದವ॥
ಅಜನು ತಾ ನರ್ಚಿಸಿದ ದಿವ್ಯಪಾದವ।
ಶ್ರೀ ದೇವಿ ಒತ್ತುವ ಶ್ರೇಷ್ಠ ಪಾದವ॥

3. ಶಿಲಿಯ ಮೆಟ್ಟಿ ಬಲಿಯ ತುಳಿದ ಚಿಕ್ಕ ಪಾದವ।
ಮೂರುಪಾದ ಭೂಮಿ ಅಳೆದ ಮುದ್ದುಪಾದವ॥
ಶ್ರೀ ಭೂದೇವಿಯರ ಸಹಿತ ನಿಂತಪಾದವ।
ಸರ್ವರಿಂದ ಸೇವೆ ಗೈವ ದಿವ್ಯಪಾದವ॥

4. ಗಂಗೆಯ ಪಡೆದ ಶೃಂಗಾರವಾದ, ಮಂಗಳ ಪಾದವ।
ಮಂಗಾಪುರದ ಕಲ್ಯಾಣ ಮೂರ್ತಿಯ ಮಹಾಪಾದವ॥
ಕಪಿಲನಾಯಕ ಪರಮಾತ್ಮನ। ಕಾರುಣ್ಯಪಾದವ।
ಜಪಿಸುತಿರು ಕಮಲೇಶನ ಪಾವನ ಪಾದವ॥

ತಿರುಪತಿಗೆ ಭೂವೈಕುಂಠ ಎಂಬ ಹೆಸರು ಯಾಕೆ ಬಂದಿತೆಂದರೆ ಪೂರ್ವದಲ್ಲಿ ಪೂಜ್ಯರಾದ ಋಷಿಗಳು ದೊಡ್ಡದಾಗಿ ಯಾಗವನ್ನು ಮಾಡಲು ಈ ಯಜ್ಞಫಲವನ್ನು ಯಾರಿಗೆ ಸಮರ್ಪಣೆ ಮಾಡಬೇಕು ಎಂದು ಯೋಚಿಸುತ್ತಿರಲು ಭೃಗುಋಷಿಗಳು ತಿಳಿದುಕೊಂಡು ಬರುವೆನೆಂದು ಹೊರಡಲು ರುದ್ರದೇವರು ಬ್ರಹ್ಮ ದೇವರು ಉದಾಸೀನವಾಗಿರುವುದು ಕಂಡು ಅವರಿಗೆ ಶಾಪವನ್ನು ಕೊಟ್ಟು ವೈಕುಂಠಕ್ಕೆ ಹೋಗಿ ಶ್ರೀ ಮಹಾವಿಷ್ಣುವಿನ ವಕ್ಷಸ್ಥಳಕ್ಕೆ ಕಾಲಿನಿಂದ ಒದ್ದರು. ಹದಿನಾಲ್ಕು ಲೋಕವನ್ನೇ

ಹೊಟ್ಟೆಯಲ್ಲಿಟ್ಟುಕೊಂಡ ಆ ವಿಷ್ಣುವಿಗೆ ಈ ಋಷಿಯ ಕಾಲಿನ ಪೆಟ್ಟು ಏನೂ ಲೆಕ್ಕವಿಲ್ಲ. ತಕ್ಷಣ ಋಷಿಯ ಪಾದವನ್ನು ತೊಳೆದನು. ಮನೆಗೆ ದೊಡ್ಡ ಬ್ರಾಹ್ಮಣರು ಬಂದರೆ ಪಾದ ತೊಳೆದು ಅರ್ಘ್ಯಪಾದ್ಯಾಚಮನಾದಿಗಳು ಕೊಟ್ಟು ಸತ್ಕರಿಸಬೇಕೆಂಬುದು ಲೋಕಕ್ಕೆ ತೋರುವನು. ಅಲ್ಲಿಂದ ಭೃಗುಋಷಿಗಳು ಬಂದು ಶ್ರೀ ಹರಿಯೇ ಸರ್ವೋತ್ತಮನೆಂದು ಲೋಕಕ್ಕೆ ಸಾರಿದನು. ಶ್ರೀ ಮಹಾಲಕ್ಷ್ಮೀ ಮುಂದೆ ವೆಂಕಟೇಶನ ಕಲ್ಯಾಣೋತ್ಸವ ನಡೆಯುವ ಪರಮಾತ್ಮನ ಸಂಕಲ್ಪದಂತೆ ಪ್ರೇಮ ಕಲಹವನ್ನು ಮಾಡಿ ಕೊಲ್ಲಾಪುರಕ್ಕೆ ಭಕ್ತರ ಅಭೀಷ್ಟದಂತೆ ಬರುವಳು (ಭೂಲೋಕಕ್ಕೆ) ಅಲ್ಲಿ ನೆಲೆಸುವಳು. ನಿತ್ಯಾವಿಯೋಗಿನಿಯಾದ ಸದಾ ತನ್ನ ವಕ್ಷಸ್ಥಳದಲ್ಲೇ ಇರುವ ಲಕ್ಷ್ಮೀ ಹೋದಳೆಂದು ತಾನು ನಟನೆ ಮಾಡುತ್ತಾ, ವೈಕುಂಠ ಬಿಟ್ಟು ಭೂಲೋಕಕ್ಕೆ ಬಂದು ವೆಂಕಟಾಚಲದಲ್ಲಿ ನೆಲೆಸುವನು. ವೆಂಕಟಾಚಲಕ್ಕೆ ಹಿಂದಿನ ಹಿಸ್ಸೆಲೆಯಲ್ಲಿ ವೃಷಭಾಚಲ, ಅಂಜನಾಚಲ, ಶೇಷಾಚಲ ಎಂದು ಹೆಸರು. ಶ್ರೀನಿವಾಸನು ವೆಂಕಟಾಚಲಕ್ಕೆ ಬಂದು ನೆಲಸಿದನು. ಮುಂದೆ ಆಕಾಶರಾಜನ ಮಗಳಾದ ಲಕ್ಷ್ಮೀ ಸಮಾನಳಾದ ಪದ್ಮಾವತಿ ದೇವಿಯನ್ನು ಬ್ರಹ್ಮಾದಿ ದೇವತೆಗಳಾದ ತನ್ನ ಪರಿವಾರದೊಂದಿಗೆ ಮಹಾ ವೈಭವದೊಂದಿಗೆ ಲಗ್ನವಾಗುವನು. ಶ್ರೀ ಮಹಾವಿಷ್ಣು ವೈಕುಂಠದಿಂದ ವೆಂಕಟಾಚಲಕ್ಕೆ ನೇರವಾಗಿ ಬಂದು ಸ್ವಯಂ ವ್ಯಕ್ತನಾಗಿ ನೆಲೆಸಿ ಕಲಿಯುಗದ ಕಲ್ಪತರುವಿನಂತೆ ತನ್ನ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುತ್ತಾ ತಿರುಮಲೆಯಲ್ಲಿ ನಿಂತಿರುವುದರಿಂದ ಇದಕ್ಕೆ ಭೂ ವೈಕುಂಠವೆಂದು ಹೆಸರು ಬಂತು. ವೆಂಕಟಾಚಲಕ್ಕೆ ಅನೇಕ ಭಕ್ತ ಜನರು ಬಂದು ತಿರುಮಲೇಶನ ದಿವ್ಯ ಸುಂದರ ರೂಪವನ್ನು ದರುಶನ ಮಾಡಿ ಸೇವಾದಿಗಳು ಮುಡುಪುಗಳು ಸಲ್ಲಿಸಿ ಪ್ರಸಾದವನ್ನು ಪಡೆಯುವರು.

ವೆಂಕಟೇಶ ಪದ್ಮಾವತಿಯ ಕಲ್ಯಾಣೋತ್ಸವ ನಡೆದ ಪವಿತ್ರ ಜಾಗ ಇಲ್ಲಿ ಕಲ್ಯಾಣ ಹಾಡನ್ನು ಹೇಳಿಕೊಳ್ಳಬೇಕು.

## ಶ್ರೀ ವೆಂಕಟೇಶ ಪದ್ಮಾವತಿ ದೇವಿಯ ಕಲ್ಯಾಣದ ಹಾಡು ||

**|| ಮಧ್ಯಮಾವತಿರಾಗ ||**

**1. ಕಲ್ಯಾಣವ ನೋಡಲು ಬನ್ನೀರಿ। ಶ್ರೀ ವೆಂಕಟೇಶ ಪದ್ಮಾವತಿಯ।**
**ನೋಡುವದಕ್ಕೆ ನಯನಾನಂದ। ಪಾಡುವದಕ್ಕೆ ಪರಮಾನಂದಾ।**
**ಕೇಳುವದಕ್ಕೆ ಶ್ರವಣಾನಂದ। ಮಾಡುವದಕ್ಕೆ ಮಹದಾನಂದಾ ||**

2. ಋಷಿಗಳು ಕೂಡಿ ಯಜ್ಞ ಮಾಡಲು। ಯಜ್ಞ ಫಲಭೋಕ್ತೃಯಾರೆಂದರಿಯಲು।
ತ್ವರಿತದಿ ಹೊರಟನು ಭೃಗು ಕೈಲಾಸಕೆ। ಬ್ರಹ್ಮಲೋಕವು ತಿರುಗಿ ಬಂದನು ॥

3. ವೈಕುಂಠದಿ ಶ್ರೀ ಹರಿಯನು ಕಂಡು। ಭೃಗು ಒದ್ದನು ಹರಿ ವಕ್ಷಸ್ಥಳಕೆ।
ಉಷ್ಣೋದಕದಿಂ ಪಾದವ ತೊಳೆದು। ಪಾದೋದಕ ಹರಿಶಿರದಲಿ ಧರಿಸಿದ ॥

4. ಸರ್ವೇಶ್ವರ ಸರ್ವೋತ್ತಮನೆಂದು। ಸಾರಿದ ಭೃಗು ಭೂಲೋಕದಿ ಬಂದು।
ಸರ್ವಸಮರ್ಪಣೆ ಶ್ರೀ ಹರಿಗೆಂದು। ಚರ ಭೂಚರರು ನಿರ್ಧರಿಸಿದರಂದು ॥

5. ಸಿರಿ ಸ್ಥಾನದಿ ಭೃಗು ಒದ್ದ ಕಾರಣದಿ। ಹೊರಟಳು ಕೊಲ್ಹಾಪುರಕೆ ಲಕ್ಷ್ಮೀಯು।
ಹರಿ ಮನವರಿತು ಸಮನಳು ತಾನು। ಭಕ್ತರಾಭೀಷ್ಟವ ನೀಡೇರಿಸಲು ॥

6. ಸಿರಿ ಪೋಗಲು ವೈಕುಂಠವ ಬಿಟ್ಟನು। ಹರಿ ತಾ ನೆಲಸಿದ ವೆಂಕಟಾದ್ರಿಯಲಿ।
ಸಿರಿ ಬಂದಳು ಹರಿ ಸೇವೆಯ ಮಾಡಲು। ಕರಿಗೋವನು ಚೋಳರಾಜಗೆ ಕೊಟ್ಟಳು ॥

7. ಹರಿಯು ಶಿರದಿ ಗೋವು ಹಾಲು ಕರೆಯಲು। ಕಂಡು ಗೋಪನುಕೊಡಲಿ ಎತ್ತಿದ।
ಹರಿಯು ಶಿರಕೆ ಘಾಯ ತಗುಲಿದ ಕಾರಣ। ಶಾಪ ಬಂದಿತು ಚೋಳಭೂಪಗೆ ॥

8. ಪಟ್ಟು ವೇದನೆಗಾಗಿ ವೈದ್ಯಮಾಡಿದ ಹರಿ। ಥಟ್ಟನೆ ಕಂಡನು ವರಾಹರೂಪನ।
ಸ್ಥಳಕೆ ಮೊದಲು ಪೂಜೆ ವರಾಹಗೆ ಎಂದನು। ಆಕೆ ಬಕುಳೆ ಹರಿ ಸೇವಿಸೆ ಬಂದಳು ॥

9. ಆಕಾಶರಾಜನ ಪುತ್ರಿ ಪದ್ಮಾವತಿಯೊಡನೆ ಸಕಲ ವೈಭೋಗದಿ ವಿಜೃಂಭಿಸುತ।
ಲಗ್ನವಾದ ವೆಂಕಟೇಶನು ತಾನು। ಲೋಕ ಸುಂದರಿಯಾದ ಪದ್ಮಿನಿಯೊಡನೆ ॥

10. ಭೂವೈಕುಂಠದಿ ನೆಲಸಿರುವಂಥ। ವೆಂಕಟೇಶ ಪದ್ಮಾವತಿ ಲಗ್ನವ
ಹೇಳಿ ಕೇಳಿದ ಸದ್ಭಕ್ತರಿಗೆಲ್ಲಾ। ಅಷ್ಟ ಸೌಭಾಗ್ಯವ ಕೊಟ್ಟು ಕಾಪಾಡುವ ॥

11. ಜಗನ್ಮಾತೆಯಾದ ಪದ್ಮಾವತಿಯು ಕಲ್ಯಾಣೋತ್ಸವ ಆರುತಿ ಬೆಳಗಿರೆ
ಜಯ ಜಯ ಮಂಗಳ ಶುಭ ಶುಭ ಮಂಗಳ। ಕಪಿಲಾಖ್ಯವೆಂಕಟೇಶನ ಚರಣಕ್ಕೆ।
ಕಲ್ಯಾಣವ ನೋಡಲು ಬನ್ನೀರಿ। ಶ್ರೀ ವೆಂಕಟೇಶ ಪದ್ಮಾವತಿಯ ॥

"ಅರಭಿರಾಗ"- ಆದಿತಾಳ

ಪ॥ ಗಂಗಾಜನನಿಯೆ ಶ್ರೀರಂಗನಾಯಕಿ। ಅಲಮೇಲು ಮಂಗತಾಯೆ ಕಾಯೆ॥
ಹದಿನಾಲ್ಕು ಲೋಕದೊಡೆಯನ ಮಡದಿಯೆ। ವೆಂಕಟರಮಣನ ಬಿಂಕದರಾಣಿಯೇ॥

1. ಮುಪ್ಪು ಇಲ್ಲದ ಅಪ್ಪ ತಿರುಪತಿ। ತಿಮ್ಮಪ್ಪ ಮುಪ್ಪುಯಿಲ್ಲದ ಗುರು ಆನಂದತೀರ್ಥರು।
ಮುಪ್ಪುಯಿಲ್ಲದ ಸಂಗ ಹರಿಭಕ್ತಿ ಸತ್ಸಂಗ। ಮುಪ್ಪುಯಿಲ್ಲದ ತಾಯಿ ಜಗಜ್ಜನನಿ ಕಾಯೆ"

2. ಶ್ರೀ ರಾಮನರಸಿ ಸೀತಾಮಾತೆ। ಶ್ರೀ ಚಂದ್ರಲಾಂಬೆ ನಾರಾಯಣಪ್ರಿಯೆ।
ಕ್ಷೀರಾಬ್ಧಿ ಕನ್ನಿಕೆ ಶ್ರೀ ವರಲಕ್ಷ್ಮಿ। ಶ್ರಿತಜನಪಾಲ ಶ್ರೀ ರಂಗನಾಥಪ್ರಿಯೆ॥

3. ಲಕ್ಷ್ಮಿನರಸಿಂಹನ ವಕ್ಷಸ್ಥಳವಾಸಿಯೆ। ಕ್ಷರಾಕ್ಷರಕೆ ಉತ್ತಮ। ಪುರುಷನರ್ಧಾಂಗಿಯೆ।
ಸಾಕ್ಷಾತ್ ವೈಕುಂಠಾಧಿಪನರಸಿಯೆ। ಮನ್ಮಥಜನನಿಯೆ। ಮಂಗಳಾಂಗಿ ಕಾಯೆ॥

4. ಬ್ರಹ್ಮಾದಿ ಸಕಲ ದೇವತೆಗಳೆಲ್ಲ। ಕ್ಷರರಾಗುವರು ಶ್ರೀ ಹರಿ ಸಂಕಲ್ಪದಿ।
ಅಕ್ಷರ ಪುರುಷಳೆ, ಆದಿ ಮಹಾಲಕ್ಷ್ಮಿ। ಅಂತರಂಗದೀ ಹರಿ, ಸ್ಮರಣೆ ನೀಡಮ್ಮ॥

5. ನಿರ್ಮನದವರ ನಿಷ್ಕಾಮವಂತರ, ನಿಜ ನುಡಿಯುವರ, ಸ್ವಧರ್ಮಾಚರಿಸುವರ।
ದಾನಧರ್ಮ ಮಾಡುವರ, ಶಾಂತಿ ಶೀಲವಂತರ। ಪೊರೆಯೇ ಶ್ರೀ ಕೊಲ್ಹಾಪುರ ನಿಲಯೇ॥

6. ಮೂರು ಅಮ್ಮರೊಳು ಮೂಲಯುತೆಯೇನೀ। ಮೂರ್ಜಗದೊಡೆಯನ। ಮುದ್ದುಮಡದಿಯೆ।
ಹೆತ್ತತಾಯಿ ಮತ್ತು ಪಾರ್ವತಿ ಸರಸ್ವತಿ, ತ್ರಿಗುಣಾಭಿಮಾನಿ। ಶ್ರೀ ಮೂಕಾಂಬಿಕೆಯೆ॥

7. ಧನವಿದ್ದವರು ಬಹುಜನವಿರುವರು
ಗುಣವಿದ್ದ ಸಜ್ಜನರತಿ ಸ್ವಲ್ಪವಿರುವರು
ಗುಣವೇ ಮುಖ್ಯ ಮೋಕ್ಷಸಾಧನೆಗೆ
ಗುಣನಿಧಿ ಕಪಿಲ ನಮಿತಪ್ರಿಯೆ ಕಾಯೆ॥

ನಂತರ ಸಮಸ್ತ ಸುತ್ತಮುತ್ತಲಿರುವ ಪುಣ್ಯಸ್ಥಳಗಳಾದ ಆಕಾಶಗಂಗೆ, ಪಾಪನಾಶಿನಿ, ಪಾತಾಳಗಂಗೆ, ಮೊದಲಾದ ಜಾಗಗಳನ್ನು ನೋಡಿ ಬೆಟ್ಟವನ್ನಿಳಿದು ಗೋವಿಂದರಾಜ ಪಟ್ಟಣ ನೋಡಿ ನಂತರ ತಿರುಚಾನೂರಿಗೆ ಹೋಗಿ ಅಲ್ಲಿ ಪದ್ಮ ಸರೋವರದ ಸ್ನಾನ, ಪದ್ಮಾಲಯ ದೇವಿ ದರುಶನ, ಅರ್ಚನ, ಆರತಿ ಸೇವಾದಿಗಳು ಮುಗಿಸಿ ಅಲ್ಲಿಗೆ ಸಮೀಪದಲ್ಲಿರುವ ಮಂಗಾಪುರದಲ್ಲಿ ಕಲ್ಯಾಣ ಶ್ರೀನಿವಾಸನ ದರ್ಶನ ಪಡೆದು ನಂತರ ನಾರಾಯಣನ ನೋಡಬೇಕು. ಕಲಿಯುಗದ ವೆಂಕಟೇಶ, ದ್ವಾಪರಯುಗದ ಜಗನ್ನಾಥ, ತ್ರೇತಾಯುಗದ ರಂಗನಾಥ, ಕೃತಯುಗದ ವರದರಾಜ, ಭರತಖಂಡಾಧಿಪ ಬದರಿನಾರಾಯಣನಾದ ನಾದ ಬ್ರಹ್ಮ ಪಾಂಡುರಂಗ, ಶ್ರೀಮಧ್ವಾಚಾರ್ಯರ ಕರಾರ್ಚಿತನಾದ ಅನ್ನಬ್ರಹ್ಮ ಉಡುಪಿ ಕೃಷ್ಣ ಇವರೆಲ್ಲರೂ ಸ್ವಯಂವ್ಯಕ್ತರು. ಈ ಸಪ್ತಕ್ಷೇತ್ರಗಳಲ್ಲಿ ಬಿಟ್ಟು ಮಿಕ್ಕ ಕ್ಷೇತ್ರಗಳಲ್ಲಿ ಪರಮಾತ್ಮನನ್ನು ಗೋಳಕ ಚಿಂತನೆಯಿಂದ ಧ್ಯಾನಿಸತಕ್ಕದ್ದು. ಗೋಳಕ ಚಿಂತನೆಯೆಂದರೆ ಮೊದಲು ಗಣಪತಿ ನಂತರ ಅಧಿಷ್ಠಾನದೇವತೆ, ಮೂರನೆಯದು ಭಾರತೀ ಮುಖ್ಯಪ್ರಾಣ, ಐದನೆಯದೆ ಶ್ರೀ ಲಕ್ಷ್ಮೀಪತಿ ಹೀಗೆ ಧ್ಯಾನಿಸತಕ್ಕದ್ದು.

## ಮಂತ್ರಾಲಯ

ಕಲಿಯುಗದ ಕಲ್ಪತರುವಾದ ಬೇಡಿದಿಷ್ಟಾರ್ಥ ಕೊಡುವ ಶ್ರೀರಾಘವೇಂದ್ರ ಸ್ವಾಮಿಗಳ ಮೂಲಬೃಂದಾವನವಿರುವ ಮತ್ತು ತುಂಗಭದ್ರಾ ತೀರದಲ್ಲಿರುವ ದಿವ್ಯಕ್ಷೇತ್ರವಾದ ಮಂತ್ರಾಲಯಕ್ಕೆ ಹೋಗಿ ಶ್ರೀರಾಘವೇಂದ್ರರ ದಿವ್ಯ ದರುಶನ ಮಾಡಿ ಸೇವಾದಿಗಳು ಮಾಡಿಕೊಂಡು ಪ್ರಸಾದ ಸ್ವೀಕರಿಸತಕ್ಕದ್ದು. ಇಲ್ಲಿ ರಾಯರ ಮಠದ ಸ್ವಾಮಿಗಳು ಇರುವರು. ಇಲ್ಲಿ ವಿದ್ಯಾರ್ಥಿನಿಲಯದಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠವನ್ನು ಹೇಳಿ ಪಂಡಿತರನ್ನು ತಯಾರು ಮಾಡುವರು. ತಿರುಪತಿಯಲ್ಲಿ ಇದ್ದ ಹಾಗೆ ಇಲ್ಲಿ ಸದಾ ಭಕ್ತಾದಿಗಳು ಸೇವೆಗಳನ್ನು ಮಾಡುತ್ತಾ ಇಷ್ಟಾರ್ಥ ಪಡೆಯುವರು. ಶ್ರೀರಾಘವೇಂದ್ರ ಸ್ವಾಮಿಗಳು ಅನೇಕ ಗ್ರಂಥಗಳನ್ನು ರಚಿಸಿರುವರು. ಮಂಚಾಲಿರಾಘಪ್ಪ ತಿರುಪತಿ ತಿಮ್ಮಪ್ಪನ ನಂಬಿ ಕೆಟ್ಟವರಿಲ್ಲ, ಎಲ್ಲಾ ನದಿಗಳಗಿಂತಲೂ ತುಂಗಭದ್ರಾನದಿಯ ಜಲವು ಬಹಳ ಸಿಹಿಯಾಗಿರುವುದು. ಅದಕ್ಕೆ ಗಂಗಸ್ನಾನ ತುಂಗಾಪಾನ ಅಂದಿದ್ದಾರೆ ಹಿರಿಯರು. ಶ್ರೀವರಾಹರೂಪಿ ಪರಮಾತ್ಮನ ದಂತಗಳಿಂದ ಈ ತುಂಗಾನದಿ ಉದ್ಭವವಾಗಿದೆ. ತುಂಗಭದ್ರಾ ತೀರದಲ್ಲಿ ಅನೇಕ ಪವಿತ್ರವಾದ ಕ್ಷೇತ್ರಗಳಿವೆ.

## ಹಂಪಿ ಕ್ಷೇತ್ರ

ಹೊಸಪೇಟೆಯ ಹತ್ತಿರ ಇರುವ ಹಂಪಿಕ್ಷೇತ್ರವು ಪ್ರಸಿದ್ಧವಾದ ಪುಣ್ಯ ಸ್ಥಳ. ಇಲ್ಲಿ ಚಕ್ರತೀರ್ಥವೆನಿಸಿದ ತುಂಗಾ ತೀರದಲ್ಲಿ ಶ್ರೀರಾಮದೇವರ ಮಂದಿರವಿದೆ. ಇಲ್ಲೇ ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತ ಶ್ರೀಯಂತ್ರೋದ್ಧಾರ ಪ್ರಾಣದೇವರಿರುವ ಪವಿತ್ರ ಜಾಗ. ಇದರ ಬಳಿಯಲ್ಲಿ ವಿರೂಪಾಕ್ಷನ ಮಂದಿರವಿದೆ. ಇದರ ಸುತ್ತಮುತ್ತ ಅನೇಕ ದೇವಸ್ಥಾನಗಳಿವೆ. ಇಲ್ಲಿ ವಿಠಲನ ಗುಡಿ ಬಹಳ ಪ್ರಸಿದ್ಧವಾದದ್ದು. ವಿಠಲನ ಮೂರ್ತಿ ಬಹಳ ಸುಂದರವಾಗಿದೆ. ಆ ಕಾಲದಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಮಹಾ ವೈಭವೋಪೇತವಾಗಿತ್ತು. ರಾಜರ ದಿವ್ಯ ಭವನಗಳ ಅವಶೇಷ, ಸಾಸಿವೆಕಾಳು ಗಣೇಶ ಮೊದಲಾದ ಅನೇಕ ಮಂದಿರಗಳು ಎಲ್ಲಾ ಶಿಥಿಲಾವಸ್ಥೆಯಲ್ಲಿವೆ. ಮಹಾವೈಭವೋಪೇತವಾದ ವಿಜಯನಗರ ಸಾಮ್ರಾಜ್ಯವನ್ನು ಕೃಷ್ಣದೇವರಾಯರ ನಂತರ ಶತೃರಾಜರು ಪಟ್ಟಣವೆಲ್ಲಾ ನಾಶ ಮಾಡಿದರು. ಇಂದಿಗೂ ಆ ಸ್ಥಳಗಳೆಲ್ಲಾ ನೋಡತಕ್ಕದ್ದು. ಈ ಹಂಪಿಗೆ ಕಿಷ್ಕಿಂದ ಅಂತ ಹೆಸರು. ಜೀವೋತ್ತಮರಾದ ಹನುಮಂತ ದೇವರು ಈ ಕಿಷ್ಕಿಂದೆಯಲ್ಲಿ ರಾಮಧ್ಯಾನ ಮಾಡುತ್ತಲಿರುವರು. ಇಲ್ಲೇ ಸಮೀಪದಲ್ಲಿ ಆನೆಗೊಂದಿ ಎಂಬ ಊರಿನ ಹತ್ತಿರ ತುಂಗಾ ತೀರದಲ್ಲಿ ನವ ಬೃಂದಾವನಗಳಿರುವ ಪವಿತ್ರ ಸ್ಥಳವಿದೆ. ಈ ಒಂಭತ್ತು ಯತಿಗಳು ಮಹಾ ತಪೋನಿಧಿಗಳು. ಇಲ್ಲೇ ಪುರಂದರದಾಸರು, ಶ್ರೀ ವ್ಯಾಸರಾಜರಿಂದ ಪುರಂದರ ವಿಠಲ ಎಂಬ ಅಂಕಿತವನ್ನು ಪಡೆದು ಐದು ಲಕ್ಷ ಪದ ಪದ್ಯ ಸುಳಾದಿ ವುಗಾಭೋಗಗಳನ್ನು ಕನ್ನಡದಲ್ಲಿ ರಚಿಸಿರುವರು. ಈ ಮಹನೀಯರು ಅನೇಕ ಪವಾಡಗಳನ್ನು ಮಾಡಿರುವರು ಮತ್ತು ಪಾಂಡುರಂಗನ ಅನುಗ್ರಹಕ್ಕೆ ಪಾತ್ರರಾಗಿರುವರು. ಕೊನೆ ಕಾಲದಲ್ಲಿ ಇವರು ಇಲ್ಲೀ ಬಂದು ಕಂಬದಲ್ಲಿ ನಿರ್ಯಾಣ ಹೊಂದಿದರು. ಪುರಂದರದಾಸರ ಕಂಬವೆಂದು ಹಂಪಿಯಲ್ಲಿ ತುಂಗಾತೀರದಲ್ಲಿದೆ. ಇಲ್ಲಿ ಒಂದು ಮಂಟಪ ಸಹ ಇದೆ. ಕೃಷ್ಣದೇವರಾಯನ ಕಾಲದಲ್ಲಿ ಆತನಿಗೆ ಬಂದ ಕುಹ ಯೋಗವನ್ನು ತಪ್ಪಿಸಲು ಶ್ರೀವ್ಯಾಸರಾಜರು ಹನ್ನೆರಡು ವರ್ಷ ಕಾಲ ಸಿಂಹಾಸನದ ಮೇಲೆ ವಿರಾಜಮಾನರಾಗಿ ರಾಜ್ಯವಾಳಿ ನಂತರ ರಾಜನಿಗೆ ತಿರುಗಿ ರಾಜ್ಯಕೊಟ್ಟು ಆಶೀರ್ವದಿಸಿದರು.

## ಚಿಪ್ಪಗಿರಿ ಕ್ಷೇತ್ರ

ಇಲ್ಲಿಗೆ ಸಮೀಪದಲ್ಲಿರುವ ಗುಂತಕಲ್ಲಿಗೆ ಮೂರು ಮೈಲು ದೂರದಲ್ಲಿ

ಪವಿತ್ರವಾದ ಚಿಪ್ಪಗಿರಿ ಕ್ಷೇತ್ರವಿದೆ. ಮಹನೀಯರಾದ ವಿಜಯದಾಸರ ಕಟ್ಟೆ ಇದೆ. ಭೃಗು ಅಂಶ ಸಂಭೂತರಾದ ಮಹಾತಪಸ್ವಿಗಳಾದ ವಿಜಯದಾಸರು ಅವರ ಕೊನೆಯ ಕಾಲದಲ್ಲಿ ಇಲ್ಲಿಗೆ ಬಂದು ತಮ್ಮ ಪಾರ್ಥಿವ ಶರೀರವನ್ನು ಬಿಟ್ಟು ಇಲ್ಲಿ ಪರಮಾತ್ಮನ ಪಾದಾರವಿಂದ ಸೇರಿದ ಪವಿತ್ರ ಸ್ಥಳ. ಪ್ರತಿ ವರ್ಷ ಕಾರ್ತೀಕ ಮಾಸ ಶುಕ್ಲ ಪಕ್ಷ ದಶಮಿ ದ್ವಾದಶಿ ಇವರ ಆರಾಧನೆ ಬಹಳ ವಿಜೃಂಭಣೆಯಿಂದ ನಡೆಯುವುದು. ಸಾವಿರಾರು ಜನ ಭಕ್ತರು ಬರುವರು. ಇವರು ಹುಟ್ಟಿದ್ದು ಚೀಕಲಪರಿಯಲ್ಲಿ ಇವರು ಹಿಂದಿನ ಜನ್ಮದಲ್ಲಿ ಪುರಂದರದಾಸರ ಮಗ ಮಧ್ವಪತಿಯಾಗಿ ಹುಟ್ಟಿ ದೇವರ ನಾಮಗಳನ್ನು ಮಾಡಿ ತಂದೆಯ ಸೇವೆಯನ್ನು ಮಾಡಿರುವರು. ಶ್ರೀ ವಿಜಯದಾಸರು ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಂಡ ಮಹಾನುಭಾವರು. ಅನೇಕ ಪದ ಪದ್ಯ ಸುಳಾದಿ ಉಗಾ ಭೋಗಗಳು ರಚಿಸಿರುವವರು. ಬಾಲ್ಯದಲ್ಲಿ ಬಹಳ ಬಡತನದಿಂದ ಬಾಳಿದರು. ನಂತರ ಪರಮಾತ್ಮನ ಅನುಗ್ರಹ ಪುರಂದರ ದಾಸರ ಆಶೀರ್ವಾದದಿಂದ ವಿಜಯವಿಠಲನ ಅಂಕಿತ ದೊರೆತು ದೊಡ್ಡ ಜ್ಞಾನಿಗಳಾದರು. ಇವರು ಯಾವ ಶಾಲೆಯಲ್ಲೂ ಓದಲಿಲ್ಲ. ನಾಮದ ಬಲ ಒಂದಿದ್ದರೆ ಸಾಕು ಅಂದಿದ್ದಾರೆ ದಾಸರು. ಇವರ ತಂಬೂರಿ ಚಿಪ್ಪಗಿರಿಯಲ್ಲಿದೆ.

## ರಾಯಚೂರು ಜಿಲ್ಲೆ

ರಾಯಚೂರು ಜಿಲ್ಲೆಯ ಸುತ್ತಮುತ್ತ ತುಂಗಭದ್ರಾ, ಕೃಷ್ಣಾ ನದಿಯ ತೀರದಲ್ಲಿರುವ ಪವಿತ್ರ ಕ್ಷೇತ್ರಗಳಲ್ಲಿ ಕರ್ನಾಟಕದ ಹರಿದಾಸರೆಲ್ಲರೂ ವಾಸ ಮಾಡುತ್ತಿದ್ದರು. ರಾಯಚೂರಿಗೆ ಸೇರಿದ ಚೇಕಲಪರಿವಿ ಎಂಬ ಗ್ರಾಮದಲ್ಲಿ ಶ್ರೀ ವಿಜಯದಾಸರು ಹುಟ್ಟಿದ ಮನೆ ಇದೆ ಮತ್ತು ಅಲ್ಲಿ ಶ್ರೀಪಾದರಾಜರು ಬಿತ್ತಿದ ಅಶ್ವಥವೃಕ್ಷದ ಕೆಳಗೆ ಲಕ್ಷ್ಮೀನರಸಿಂಹನ ವಿಗ್ರಹವಿದೆ. ದೊಡ್ಡದಾದ ಕಟ್ಟೆ ಇದೆ. ಅಲ್ಲಿ ತುಂಗಭದ್ರೆಯಲ್ಲಿ ಮಿಂದು ನರಸಿಂಹ ದೇವರ ದರುಶನ ಪ್ರಸಾದ ಸ್ವೀಕಾರ ಮಾಡತಕ್ಕದ್ದು. ಇದು ಶ್ರೀ ವಿಜಯದಾಸರು ಹುಟ್ಟಿ ಬೆಳೆದ ಊರು. ಈ ಸ್ಥಳದಲ್ಲಿ ವಿಜಯದಾಸರು ಅನೇಕ ಪೂಜಾದಿಗಳು ಪವಾಡಗಳು ಮಾಡುತ್ತಾ ಜನರಿಗೆ ಉಪಕಾರ ಮಾಡುತ್ತಾ ಕಾಲ ಕಳೆದರು. ಮೋಹನದಾಸರು ಇವರ ಸಾಕು ಮಗ. ಇಲ್ಲಿ ಸಮೀಪದಲ್ಲಿರುವ ಉತ್ತನೂರು ಕ್ಷೇತ್ರದಲ್ಲಿ ಗಣೇಶ ಸಂಭೂತರು ಮಹಾಮಹಿಮೋಪೇತರು ಆದ ಶ್ರೀ ಗೋಪಾಲದಾಸರ ಮನೆ. ಅವರು ಮಾಡಿದ ಪೂಜಾ ವಿಗ್ರಹಗಳೂ ಅವೆ. ಇವರು ಶ್ರೀ ವಿಜಯದಾಸರ ಶಿಷ್ಯರು. ಅನೇಕ ದೇವರ ನಾಮಗಳನ್ನು

ಮಾಡಿರುವರು ಮತ್ತು ಇವರು ಆಯುಷ್ಯದಲ್ಲಿ 40 ವರ್ಷಗಳನ್ನು ಇವರ ಶಿಷ್ಯರಾದ ಶ್ರೀ ಜಗನ್ನಾಥದಾಸರಿಗೆ ಕೊಟ್ಟ ಮಹಾತ್ಯಾಗಮೂರ್ತಿಗಳು. ಅಲ್ಲಿ ಸಮೀಪದಲ್ಲಿರುವ ಮಾನವಿ ಕ್ಷೇತ್ರದಲ್ಲಿ ಶ್ರೀ ಜಗನ್ನಾಥದಾಸರ ಮಂದಿರದಲ್ಲಿ ದಾಸರ ಕಂಬವಿದೆ. ಅದನ್ನು ದರ್ಶನ ಮಾಡಿಕೊಂಡು ಶ್ರೀ ಜಗನ್ನಾಥದಾಸರು ರಚಿಸಿದ ಮೇರುಕೃತಿಯಾದ ಶ್ರೀ ಹರಿಕಥಾಮೃತಸಾರವನ್ನು ಇಲ್ಲಿ ಈ ಪವಿತ್ರ ಸ್ಥಳದಲ್ಲೇ ಹೇಳತಕ್ಕದ್ದು. ಇವರು ಅನೇಕ ದೇವರ ನಾಮಗಳನ್ನು ರಚಿಸಿರುವರು. ಇವರು ಪ್ರಹ್ಲಾದರಾಜರ ತಮ್ಮಂದಿರಾದ ಸಹ್ಲಾದರಾಜರ ಅಂಶಸ್ಥರು.

## ಮಳಖೇಡ ಕ್ಷೇತ್ರ

ಶ್ರೀ ಟೀಕಾರಾಯರ ಬೃಂದಾವನವು ಮಳಖೇಡ ಕ್ಷೇತ್ರದಲ್ಲಿದೆ, ರಾಯಚೂರಿನಿಂದ ಕಾಗಿನಿ ನದಿ ತೀರದಲ್ಲಿರುವ ಮಳಖೇಡವೆಂಬ ಪವಿತ್ರವಾದ ಕ್ಷೇತ್ರಕ್ಕೆ ಹೋಗಿ ನದಿಯಲ್ಲಿ ಸ್ನಾನಾದಿಗಳು ಮಾಡಿಕೊಂಡು ಶೇಷಾಂಶ ಮತ್ತು ಇಂದ್ರಾಂಶ ಸಂಭೂತರಾದ ಶ್ರೀ ಜಯತೀರ್ಥರ ದಿವ್ಯ ಬೃಂದಾವನವನ್ನು ದರ್ಶನ ಮಾಡತಕ್ಕದ್ದು. ಶ್ರೀ ಜಯತೀರ್ಥರು ಶ್ರೀ ಮಧ್ವಾಚಾರ್ಯರು ಬರೆದ ಕೃತಿಗಳಿಗೆ ಟೀಕೆ ಟಿಪ್ಪಣಿ ಬರೆದು ಟೀಕಾರಾಯರೆಂದು ಪ್ರಸಿದ್ಧ ಪಡೆದ ಮಹಾಜ್ಞಾನಿಗಳು. ಶ್ರೀಮನ್ನ್ಯಾಯಸುಧಾ ಎಂಬ ಉತ್ಕೃಷ್ಟ ಗ್ರಂಥವನ್ನು ಬರೆದಿರುವರು. ಇವರು ಬಾಲ್ಯದಲ್ಲಿ ದೊಡ್ಡ ಶ್ರೀಮಂತರ ಮನೆಯಲ್ಲಿ ಮುದ್ದಾಗಿ ಬೆಳೆದು ಸದಾ ಕುದರಿ ಮೇಲೆ ಓಡ್ಯಾಡುತ್ತಿದ್ದ ಧೊಂಡೂ ರಘುನಾಥರಾಯರು. ಶ್ರೀ ಅಕ್ಷೋಭ್ಯಮುನಿಗಳ ಕಾರುಣ್ಯದಿಂದ ಪ್ರಸಿದ್ಧ ಟೀಕಾಚಾರ್ಯರಾದರು. ಜೀವನ ಸಂಸ್ಕಾರ ಪರಮಾತ್ಮನ ಅನುಗ್ರಹವಿರಬೇಕು. ಶ್ರೀ ಜಯತೀರ್ಥರ ಬೃಂದಾವನ ಸನ್ನಿಧಾನದಲ್ಲಿ ವಿದ್ವಾಂಸರು ಶ್ರೀ ಸುಧಾ ಮಂಗಳವನ್ನು ಮಾಡುವ ರೂಢಿ ಉಂಟು. ಇಲ್ಲಿಗೆ ಸಮೀಪದಲ್ಲಿರುವ ಕಲ್ಲೂರು ಕ್ಷೇತ್ರದಲ್ಲಿ ಸಾಣೇಕಲ್ಲಿನ ಮೇಲೆ ಲಕ್ಷ್ಮೀಕಾಂತಾಚಾರ್ಯರಿಗೆ ಶ್ರೀಲಕ್ಷ್ಮೀ ದೇವಿ ಅವಿರ್ಭೂತಳಾಗಿರುವಳು. ಕಲ್ಲೂರು ಲಕ್ಷ್ಮಿ ಎಂದು ಬಹಳ ಪ್ರಸಿದ್ಧಿ ಸ್ಥಳ. ನಂಬಿದ ಭಕ್ತರಿಗೆ ಬೇಡಿದ ಇಷ್ಟಾರ್ಥಗಳನ್ನು ಕೊಡುತ್ತಾ ಶ್ರೀ ವೆಂಕಟೇಶನೊಡನೆ ಈ ಕ್ಷೇತ್ರದಲ್ಲಿರುವಳು.

## ಸನ್ನತಿ ಚಂದಮ್ಮ

ಗುಲ್ಬರ್ಗಾ ಜಿಲ್ಲೆಗೆ ಸಮೀಪದಲ್ಲಿರುವ ಭೀಮಾನದಿ ತೀರದಲ್ಲಿ ಸನ್ನತಿ ಎಂಬ

ಊರಿನಲ್ಲಿ ಶ್ರೀ ಚಂದ್ರಲಾದೇವಿಯ ದೇವಸ್ಥಾನವಿರುವುದು. ಈಕೆ ಸೀತಾದೇವಿ, ಶ್ರೀರಾಮದೇವರ ಪಟ್ಟಾಭಿಷೇಕ ಸಮಯದಲ್ಲಿ ಸಮುದ್ರರಾಜನಿಗೆ ಆಹ್ವಾನ ಕೊಡಲಿಲ್ಲ ವೆಂದು ಸಮುದ್ರ ರಾಜನು ಶ್ಯಾಪ ಕೊಟ್ಟನಂತೆ. ತಿರುಗಿ ಭೂಮಿ ಮೇಲೆ ಪುಟ್ಟಿದಳಂತೆ ಸೀತಾಮಾತೆ, ಪರಮಾತ್ಮನು ನಾರಾಯಣ ಮುನಿಯಾಗಿ ಪುಟ್ಟಿದನಂತೆ. ಈ ಚಂದ್ರಲಾದೇವಿಗೆ ನಾರಾಯಣ ಮುನಿಗೆ ಲಗ್ನವಾಯಿತಂತೆ.ಸಮುದ್ರರಾಜ ಅಸುರನಾಗಿ ಪುಟ್ಟಿದನಂತೆ ಆತನನ್ನು ಪರಮಾತ್ಮ ಸಂಹಾರ ಮಾಡಿದನಂತೆ. ಚಂದ್ರಲಾದೇವಿ ಈ ಸನ್ನತಿ ಕ್ಷೇತ್ರದಲ್ಲಿ ನಿಂತು ಬೇಡಿದ ಭಕ್ತರಿಗೆ ಇಷ್ಟಾರ್ಥ ಕೊಡುತ್ತಿರುವಳು. ಇಲ್ಲಿ ಸೀತಾದೇವಿ ಎರಡು ಪಾದಗಳಿವೆ. ಪುರಾತನ ದೊಡ್ಡ ದೇವಸ್ಥಾನವಿದೆ.

"ಭೃಗುಮುನಿ ಶ್ರೀಹರಿ ಎದೆಗೊದಿಯಲು ನೀ
ಅಗಲಿ ಬಂದೆಯೇ ಚಂದ್ರಲಾಂಬೆ।
ವಿಗಡ ಜನರನು ಮೋಹ ಬಡಿಸಿ ಕಲಿ
ಯುಗಾದಿಗೆ ಬಂದೆ ಚಂದ್ರಲಾಂಬೆ ॥
ಗುರುಪ್ರಾಣೇಶರ ವಚನದಂತೆ ನಿನ
ಸ್ಮರಿಸುತ ಬದುಕುವೆ ಚಂದ್ರಲಾಂಬೆ।
ಧರಿಯೊಳು ಸನ್ನತಿ ಕ್ಷೇತ್ರ ನಿವಾಸಿನಿ
ವರದ ವಿಠಲನ ತೋರೆ ಚಂದ್ರಲಾಂಬೆ ॥

ಎಂದು ಹರಿದಾಸರು ಹಾಡಿರುವರು. ಚಂದ್ರಲಾದೇವಿಯನ್ನು ಪೂಜಿಸಿ ಸೀರೆ ಕುಬಸ ಉಡಿ ತುಂಬುವರು.

ಅಲ್ಲಿಂದ ಕೊಲ್ಹಾಪುರಕ್ಕೆ ಬಂದು, ಇಲ್ಲಿ ಜಗಜ್ಜನನಿಯಾದ ಶ್ರೀ ಮಹಾಲಕ್ಷ್ಮೀ ಶ್ರೀ ವೆಂಕಟೇಶನ ಕಲ್ಯಾಣೋತ್ಸವ ನಿಮಿತ್ತ ಮತ್ತು ಭಕ್ತರ ಪ್ರಾರ್ಥನಾನುಸಾರ ಕೊಲ್ಹಾಪುರಕ್ಕೆ ಬಂದು ನೆಲೆಸಿರುವಳು. ಲಕ್ಷ್ಮಿಯ ದಿವ್ಯ ದರ್ಶನ ಪಡೆದು ಈಕೆಗೆ ಸೀರೆ ಕುಬಸ ಮರದ ಬಾಗಿನ ಸಾಮಾನು ಪುರಾಣಿ ಕೊಬ್ರಿ ಬಟ್ಲು ವುಡಿ ತುಂಬಬೇಕು. ವಿಗ್ರಹವು ಬಲು ಸುಂದರವಾಗಿದೆ.

## ಪುಂಢರಾಪುರ

ಕೊಲ್ಹಾಪುರದ ಸಮೀಪದಲ್ಲಿ ಪಂಡರಾಪುರವಿದೆ. ಈ ಕ್ಷೇತ್ರವು ಭೀಮಾನದಿ ತೀರದಲ್ಲಿದೆ. ಭೀಮಾನದಿಗೆ ಚಂದ್ರಭಾಗಾನದಿ ಎಂದು ಹೆಸರು. ಪಾಂಡುರಂಗನ

ದೇವಸ್ಥಾನವು ಬಹಳ ದೊಡ್ಡದಾಗಿದೆ. ಚಂದ್ರಭಾಗಾದಲ್ಲಿ ಸ್ನಾನಾದಿಗಳನ್ನಾಚರಿಸಿ ನಾದಬ್ರಹ್ಮನಾದ ಪಾಂಡುರಂಗನನ್ನು ದರ್ಶನ ಮಾಡಿ, ಪ್ರಸಾದ ಸ್ವೀಕರಿಸಬೇಕು. ಪಾಂಡುರಂಗನು ಸಾಧುಸಂತರು ಹರಿದಾಸರ ಒಡೆಯನು. ದಾಸಚತುಷ್ಟಯರಾದ ಶ್ರೀ ಪುರಂದರದಾಸರು ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮಹಾ ಅಪರೋಕ್ಷ ಜ್ಞಾನಿಗಳು. ಇವರು ವಿಠಲನ ಮುದ್ರಿಕೆ ಮೇಲೆ ಅನೇಕ ದೇವರ ನಾಮುಗಳನ್ನು ರಚಿಸಿರುವರು. ಸದಾ ವಿಠಲನ ನಾಮ ಸಂಕೀರ್ತನೆ ಮಾಡುತ್ತಾ ಕುಣಿಯುತ್ತಾ ಅವನೊಡನೆ ನಲಿಯುತ್ತಾ ಪ್ರತ್ಯಕ್ಷೀಕರಿಸಿಕೊಂಡ ಪರಮ ಭಗವದ್ಭಕ್ತರು. ಇವರು ಅನೇಕ ಮಹಿಮೋಪೇತವಾದ ಪವಾಡಗಳನ್ನು ಮಾಡಿದ ಮಹನೀಯರು. ಜಗನ್ನಾಥದಾಸರಿಗೆ ಜಗನ್ನಾಥವಿಠಲ ಎಂಬ ಅಂಕಿತದ ಒಂದು ಶಿಲೆ ಗೋಪಾಲದಾಸರು ಹೇಳಿದ ಹಾಗೆ ಚಂದ್ರಭಾಗಾ ನದಿಯಲ್ಲಿ ದೊರೆಯಿತು. ಪೂರ್ವಕ್ಕೆ ಈ ಕ್ಷೇತ್ರದಲ್ಲಿ ಪುಂಡಲೀಕನೆಂಬ ಭಕ್ತಾಗ್ರೇಸರನಿದ್ದನು. ಅವನು ಹರಿಭಕ್ತ, ತಂದೆ ತಾಯಿ ಸೇವೆಯನ್ನು ಭಕ್ತಿ ಶ್ರದ್ಧೆಯಿಂದ ಮಾಡುತ್ತಿದ್ದನು. ಇವನ ಭಕ್ತಿಗೆ ಮೆಚ್ಚಿ ಪಾಂಡುರಂಗನು ಪ್ರತ್ಯಕ್ಷನಾದನು. ಆ ಸಮಯದಲ್ಲಿ ಪುಂಡಲೀಕನು ತಂದೆ ತಾಯಿ ಸೇವೆಯನ್ನು ಮಾಡುತ್ತಿದ್ದನು. ಒಂದು ಇಟ್ಟಂಗಿ ಕಲ್ಲನ್ನು ಕೊಟ್ಟು ಅದರ ಮೇಲೆ ನಿಲ್ಲು ಬರುವೆನು ಎಂದು ಹೇಳಿ ತನ್ನ ಕೆಲಸವನ್ನು ಪೂರೈಸಿ ಬಂದು ನೋಡಲು ಆ ಇಟ್ಟಂಗಿ ಕಲ್ಲು ಮೇಲೆ ಭಕ್ತ ಪುಂಡಲೀಕನಿಗೊಲಿದು ಹಾಗೇ ನಿಂತು ಬಿಟ್ಟನು. ಪಾಂಡುರಂಗನು ಟೊಂಕದ ಮೇಲೆ ಕೈ ಇಟ್ಟುಕೊಂಡಿರುವನು. ನಂಬಿದ ಭಕ್ತರಿಗೆ ಸಂಸಾರ ಸಾಗರದಲ್ಲಿ ಟೊಂಕದಷ್ಟೇ ಕೊಟ್ಟು ದಾಟಿಸುವೆನು ಎಂದು ಅರ್ಥ. ಇಲ್ಲಿ ನಮ್ಮ ಪರಮಗುರುಗಳಾದ ಶ್ರೀ ಸತ್ಯಧ್ಯಾನತೀರ್ಥರ ಬೃಂದಾವನವಿದೆ.

"ಇಟ್ಟಂಗಿ ಕಲ್ಲು ಮೇಲೆ ಊರಿನಿಂತ ಎರಡುಪಾದ। ಸಾಗರಚಾಮಮೇಘಶ್ಯಾಮ ಸೃಷ್ಟಿಕರ್ತ ಸಾರ್ವಭೌಮ। ಟೊಂಕದ ಮೇಲೆ ಕೈಯ್ಯನಿಟ್ಟು ಗದೆಯಲ್ಲಿ ಲತ್ತಿಪೆಟ್ಟು। ತಗ್ಗು ಬಿದ್ದ ವಳ್ಳಿ ಮಿಟ್ಟು ತುಳಸಿಮಣಿ ಬುಕ್ಕೆಟ್ಟು। ಹಗಲು ಇರುಳು ಭಜನೆಗಳು ಭಜನೆ ಮೂರ್ತಿಗೋಪಾಲ। ಸಾಧು ಸಂತರ ಲೋಲ ಟೊಪ್ಪಿಗೆಯಲ್ಲಿ ಲಿಂಗಾರ ಥಳಕು ಬೆಳಕು ಚಂದ್ರಹಾರ। ಮುಂದೆ ಹರಿಯೋ ಭೀಮಾತೀರ। ಚಾತುರ್ಮಾಸಿ ಪರ್ಶಿ ಬಹಳ, ಪುರಂದರ ವಿಠಲನ ನಾದವು ಬಹಳ। ವಿಠಲ ವಿಠಲ ಪಾಂಡುರಂಗ ಜಯ ಜಯ ವಿಠಲ ಪಾಂಡುರಂಗ। ಎಂದು ಇಲ್ಲಿ ಪುರಂದರ ದಾಸರು ಭಕ್ತಿ ಪುರಸ್ಸರವಾಗಿ ಹಾಡಿರುವರು.

## ನಾಸಿಕ್

ಪಂಢರಾಪುರದಿಂದ ಗೋದಾವರೀ ತೀರದಲ್ಲಿರುವ ನಾಸಿಕ್ ಕ್ಷೇತ್ರಕ್ಕೆ ಬಂದು ವೃದ್ಧ ಗಂಗೆ ಎನಿಸಿದ ಗೋದಾವರಿಯಲ್ಲಿ ಮಿಂದು ದೇವಸ್ಥಾನಗಳಲ್ಲಿ ದರ್ಶನಾದಿಗಳನ್ನು ಪಡೆಯಬೇಕು. ಗೋದಾವರಿ ನದಿ ಸಪ್ತ ಮಹಾನದಿಗಳಲ್ಲಿ ಒಂದಾಗಿದೆ. ಸ್ನಾನ ಮಾಡುವಾಗ ಗೋದಾವರ್ಯಾ ದಕ್ಷಿಣ ತೀರೇ ಎಂದು ಹೇಳತಕ್ಕದ್ದು. ಗುರುವು ಸಿಂಹರಾಶಿಯಲ್ಲಿ ಬಂದಾಗ ಗಂಗೆಯಿಂದ ಕೂಡಿ ಸಕಲ ತೀರ್ಥಗಳು ಬಂದು ಗೋದಾವರಿಯಲ್ಲಿ ನೆಲೆಸಿರುವುದರಿಂದ ಅಂದು ಗೋದಾವರಿ ನದಿ ಸ್ನಾನ ಬಹಳ ಶ್ರೇಷ್ಠವಾದುದು. ನಾಸಿಕ್ ಹತ್ತಿರ ಇರುವ ತ್ರ್ಯಂಬಕ ಪರ್ವತ ಶಿಖರದಿಂದ ಗೋದಾವರಿ ಹರಿದು ಬರುವುದು. ಗುರುವು ಕನ್ಯಾರಾಶಿಯಲ್ಲಿ ಬಂದಾಗ ಕೃಷ್ಣಾ ನದಿ ಸ್ನಾನ ಶ್ರೇಷ್ಠವಾದದ್ದು.

**ನದಿಯ ತೀರದಲ್ಲಿರುವ ಕ್ಷೇತ್ರದಿ**
**ಮುದದಿಂದ ಮನೆಯ ಕಟ್ಟಲು ಬೇಕು**
**ಹರಿಯ ಮಂದಿರ ಒಂದು ಅಲ್ಲಿರಲು ಬೇಕು**
**ಹರಿಭಕ್ತರಲ್ಲಿ ವಾಸಿಸಬೇಕು**

**ಸಹಜ ಜೀವನ ಸಹೃದಯದಿ**
**ಸಹಬಾಳ್ವೆಯಿಂದಿರಬೇಕು.**
**ಕಪಿಲಾಖ್ಯಸ್ವಾಮಿಯ ದಯಕೆ ಪಾತ್ರರಾಗಿ**
**ಭವಬಂಧನಗಳ ನೀಗಲು ಬೇಕು।**

ಎಂದು ಪವಿತ್ರವಾದ ನದಿಯ ಸ್ನಾನ ಪರಮಾತ್ಮನ ದರ್ಶನ, ಧ್ಯಾನ, ಸತ್ಸಂಗ ತಪ್ತ ಮುದ್ರಾಧಾರಣ ಅವಶ್ಯ ಮಾಡತಕ್ಕದ್ದು.

ನಾಸಿಕದಿಂದ ಬೊಂಬಾಯಿಗೆ ಹೋಗಿ ಸುಂದರವಾದ ಮತ್ತು ದೊಡ್ಡಪಟ್ಟಣವಾದ ಬೊಂಬಾಯಿ ನಗರವನ್ನು ವೀಕ್ಷಿಸಿ ಅಲ್ಲಿರುವ ಉತ್ತರಾದಿ ಮಠಾಧೀಶರು ನಡೆಸುತ್ತಿರುವ ವಿದ್ಯಾರ್ಥಿನಿಲಯವೆಂಬ ದೊಡ್ಡ ವಿದ್ಯಾಪೀಠ ಮುಳುಂದದಲ್ಲಿ ಇರುವುದು (ಸಂಸ್ಕೃತದ) ದಿವಂಗತರಾದ ಶ್ರೀ ವಾಹು ಗೋಪಾಲಾಚಾರ್ಯರು ಅದನ್ನು ನೋಡಿಕೊಳ್ಳುತ್ತಿದ್ದರು. ಈಗ ಅವರ ಮಕ್ಕಳಾದ

ಪಂಡಿತ ಶ್ರೀವಿದ್ಯಾಸಿಂಹಾಚಾರ್ಯರು ಬಹಳ ಶ್ರದ್ಧೆಯಿಂದ ನೋಡಿಕೊಂಡು ನಡೆಸುತ್ತಾರೆ. ಯಾತ್ರಾರ್ಥಿಗಳು ಬೊಂಬಾಯಿಯಲ್ಲಿ ಇಲ್ಲಿ ಇಳಿದುಕೊಳ್ಳಬಹುದು.

## ಪ್ರಯಾಗ ಕ್ಷೇತ್ರ

ಬೊಂಬಾಯಿ ಇಂದ ಉತ್ತರಕ್ಕೆ ಪ್ರಯಾಗ ಕ್ಷೇತ್ರಕ್ಕೆ ಹೋಗತಕ್ಕದ್ದು. ಬ್ರಹ್ಮದೇವರು ಇಲ್ಲಿ ಯಾಗ ಮಾಡಿದ ಸಲುವಾಗಿ ಪ್ರಯಾಗ ಎಂದು ಈ ಕ್ಷೇತ್ರಕ್ಕೆ ಹೆಸರು ಬಂದಿದೆ. ಅಲಹಾಬಾದ್ ಎಂದು ಕೂಡಾ ಈ ಊರಿಗೆ ಹೆಸರು. ಇಲ್ಲಿ ಗಂಗಾ, ಯಮುನಾ, ಸರಸ್ವತೀ ಮೂರು ನದಿಗಳು ಕಲೆಯುವ ಸಂಗಮವಿದೆ. ಪವಿತ್ರವಾದ ಈ ಸಂಗಮದಲ್ಲಿ ಸ್ನಾನಾದಿಗಳು ಬಹಳ ಶ್ರೇಷ್ಠ. ಇಲ್ಲಿ ಸ್ತ್ರೀಯರು ಪತಿಯೊಡನೆ ಮಿಂದು ವೇಣೀದಾನವನ್ನು ಕೊಟ್ಟು ತುಂಬಿದ ಮರದ ಬಾಗಿನವನ್ನು ಕೊಡುವ ಸಂಪ್ರದಾಯ ಉಂಟು. ಇಲ್ಲಿ ವೇಣೀ ಮಾಧವನ ದರುಶನ ಮಾಡತಕ್ಕದ್ದು. ಮೂರು ಮಹಾನದಿಗಳ ಮಿಲನವೇ ತ್ರಿವೇಣಿ ಸಂಗಮ.

## ಕಾಶಿ ಕ್ಷೇತ್ರ

**ಗಂಗಾಸ್ತೋತ್ರ : ಗಂಗಾ ಗಂಗೇತಿ ಯೋ ಭ್ರೂಯಾತ್ ಯೋಜನಾ**
**ನಾಂ ಶತ್ಶೈರಪಿ. ಮುಚ್ಯತೇ ಸಕಲ ಪಾಪೇಭ್ಯ**
**ವಿಷ್ಣುಲೋಕಂ ಸಗಚ್ಛತಿ ॥**

**ಗಂಗಾಯಾಂ ಮಾಧವೋ ದೇವ : ಶಂಖ ಚಕ್ರ**
**ಗಧಾಧರ : ಲಸತ್ಪದ್ಮಧರೋಧ್ಯೇಯ ಸ್ತತ್ರ**
**ಸ್ನಾನಂ ನರೇಶ್ವರ ॥**
**ಭಾಗೀರಥಿ, ಜಾನ್ಹವಿ, ಎಂದು ಗಂಗೆ ಹೆಸರು.**

ಭಗೀರಥ ರಾಜನ ತಪೋಬಲದಿಂದ ಧರೆಗೆ ಬಂದ ರುದ್ರದೇವರ ಶಿರದ ಜಟೆದ್ವಾರಾ ಧರೆಗೆ ಬಂದಳು. ಗಂಗೋತ್ರಿ ಎಂಬ ಜಾಗಕ್ಕೆ ಸ್ವಲ್ಪ ದೂರದಲ್ಲಿರುವ ಗೋಮುಖ ಎಂಬುದು ಗಂಗೆಯ ಉಗಮಸ್ಥಾನ. ಗಂಗಾಲಹರಿಯೆಂಬ ಕೃತಿಯಲ್ಲಿ ಗಂಗೆಯನ್ನು ಬಹಳ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಶ್ರೀ ತ್ರಿವಿಕ್ರಮದೇವರ ನಖ ಸತ್ಯಲೋಕಕ್ಕೆ ತಗುಲಿ ವ್ಯಾಪಿಸಿದ ಗಂಗಾಜಲವನ್ನು ಬ್ರಹ್ಮದೇವರು ಪರಮಾತ್ಮನ ಪಾದವನ್ನು ತೊಳೆದು ನಂತರ ಸ್ವರ್ಗಲೋಕದಿಂದಿಳಿದು ಪರಮಾತ್ಮನ ಪಾದೋದಕ

ವೆಂದೆನಿಸಿ ಶಿವನ ಜಟೆಯಿಂದ ಭಗೀರಥ ರಾಜನ ಮೂಲಕ ಭೂಮಿಗಿಳಿದು ಬಂದು ಗಂಗೆ ಜನರನ್ನು ಪಾವನಗೊಳಿಸಿದಳು. ಗಂಗೆಯ ದರುಶನ ಸ್ನಾನಪಾನ ಧ್ಯಾನ ಸ್ಥವನದಿಂದಲೇ ಪಾಪಗಳೆಲ್ಲಾ ನಾಶವಾಗಿ ಪುಣ್ಯವು ದೊರೆಯುವದೆಂಬಲ್ಲಿ ಸಂಶಯವಿಲ್ಲ. ರುದ್ರದೇವರಿಗೆ ಬ್ರಹ್ಮಕಪಾಲ ವಿಮೋಚನವಾದ ಸ್ಥಳವು ಕಾಶಿ ಕ್ಷೇತ್ರ, ಮಹಾರುದ್ರದೇವರು, ಮಹಾ ವೀರವೈಷ್ಣವರು, ಸದಾ ವಿಷ್ಣು ಧ್ಯಾನ ಮಾಡುವರು. ಕಾಶಿಯಲ್ಲಿ ಗಂಗಾಸ್ನಾನಾದಿಗಳು ಮಾಡಿ ಬಿಂದುಮಾಧವನ ದರ್ಶನ ಪಡೆದು ಮತ್ತು ವಿಶ್ವನಾಥನ ದರ್ಶನ ಮಾಡತಕ್ಕದ್ದು. ಗಂಗಾ ತೀರದಲ್ಲಿರುವ ಪ್ರತಿ ಕ್ಷೇತ್ರಗಳಲ್ಲಿ ವಿಷ್ಣು ಮಂದಿರಗಳು ಇವೆ. ಗಂಗಾ ಸ್ನಾನವನ್ನು ಮಾಡಿ ಸ್ತ್ರೀಯರು ಮರದ ಬಾಗಿನ ಕೊಡತಕ್ಕದ್ದು. ಹಿಂದಿನ ಕಾಲದಲ್ಲಿ ಶ್ರೀ ವಿಜಯದಾಸರ ಸಂಗಡ ಗಂಗಾಯಾತ್ರೆಗೆ ಹೋದ ಜನರಲ್ಲಿ ಪುಣ್ಯವಂತರಾದ ಮುತ್ತೈದೆಯರು ಮರದ ಬಾಗಿನ ಕೊಟ್ಟರೆ ಗಂಗಾದೇವಿ ಪ್ರತ್ಯಕ್ಷವಾಗಿ ನದಿಯ ಮಧ್ಯದಿಂದ ಬಂದು ಬಾಗಿನ ತೆಗೆದುಕೊಂಡಳಂತೆ. ಪರ್ವ ಕಾಲಗಳಲ್ಲಿ ಗಂಗೆ ಉಕ್ಕೇರಿ ಬಂದಾಗ ಗಂಗಾದೇವಿ ಸಜ್ಜನರಿಗೆ ದರ್ಶನ ಕೊಡುತ್ತಿದ್ದಳಂತೆ, ಪರ್ವಕಾಲಗಳಲ್ಲಿ ನದೀ ಸ್ನಾನಾದಿಗಳು ಬಹಳ ಶ್ರೇಷ್ಠವಾದದ್ದು. ವೈಶಾಖ ಸ್ನಾನ, ಕಾರ್ತೀಕ ಸ್ನಾನ, ಮಾಘಸ್ನಾನ, ನದೀ ತೀರಗಳಲ್ಲಿ ಮಾಡುವುದು ಶ್ರೇಷ್ಠವಾದದ್ದು. ಅನುಕೂಲವಿಲ್ಲದಿದ್ದರೆ ಹುಣ್ಣಿಮೆಯಲ್ಲಾದರೂ ಮಾಡಿದರೆ ಪುಣ್ಯಪ್ರಾಪ್ತಿ. ಸ್ತ್ರೀಯರು ಆ ಮೂರು ಹುಣ್ಣಿಮೆ ಶಕ್ತ್ಯಾನುಸಾರ ಮರದ ಬಾಗಿನ ಕೊಡತಕ್ಕದ್ದು. ಗಂಗಾ ಜಯಂತಿ ದಿನ ಸಹ ಮುತ್ತೈದೆಯರಿಗೆ ಮರದ ಬಾಗಿನವನ್ನು ಕೊಡಬೇಕು. ಕಾಶಿಗೆ ಪ್ರಾಚೀನವಾದ ಹೆಸರು ವಾರಣಾಸಿ ಎಂದು ಇಂದಿಗೂ ಬಳಕೆಯಲ್ಲಿದೆ.

## ಗಯಾ ಕ್ಷೇತ್ರ

ಕಾಶಿಯಿಂದ ಗಯಾ ಕ್ಷೇತ್ರಕ್ಕೆ ಬಂದು ಪವಿತ್ರವಾದ ಫಲ್ಗುಣಿ ನದಿಯಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಾದಿಗಳನ್ನಾಚರಿಸತಕ್ಕದ್ದು. ಪುರುಷರು ಇಲ್ಲಿ ಪಿತೃ ಕಾರ್ಯಗಳನ್ನು ಮಾಡಿ ಪಿಂಡ ಪ್ರದಾನವನ್ನು ಮಾಡಿದರೆ ಪಿತೃಗಳಿಗೆ ಸದ್ಗತಿ ದೊರೆಯುವುದೆಂದು ಪುರಾಣ ಪ್ರಸಿ

ಗಯೆಯು ಕಾಶಿಯಷ್ಟೇ ಪುರಾತನ ಪುಣ್ಯಕ್ಷೇತ್ರವಾಗಿದೆ ಮೃತ ಹೊಂದಿದ ಹಿರಿಯರಿಗೆ ಇಲ್ಲಿ ಶ್ರಾದ್ಧ ಮಾಡಿದರೆ ಸದ್ಗತಿಯಾಗುವದು.

ಬ್ರಹ್ಮಪುತ್ರನಾದ ಮರೀಚಿ ಋಷಿಗಳ ಪತ್ನಿ ಮತ್ತು ಯಮಧರ್ಮನ ಪುತ್ರಿಯಾದ ಧರ್ಮವ್ರತೆ ಪತಿಯ ಪಾದ ಒತ್ತುವ ಸಮಯದಲ್ಲಿ ಸರಿಯಾಗಿ ಬ್ರಹ್ಮದೇವರು ಮನೆಗೆ ಬರಲು ಆಕೆ ಮಾವನಿಗೆ ಉಪಚರಿಸಲು ಹೋದರೆ ಗಂಡನಿಗೆ ಸಿಟ್ಟುಬಂದು ಕಲ್ಲಾಗೆಂದು ಶಪಿಸಲು, ಆಗ ಧರ್ಮವ್ರತೆ ಧರ್ಮಶಿಲೆಯಾಗಲು ಪತಿವ್ರತೆಯಾದ ಆ ಧರ್ಮಶಿಲೆಯನ್ನು ಬ್ರಹ್ಮದೇವರು ಗಯಾಸುರನ ಶಿರದ ಮೇಲೆ ಇರಿಸಿದರು. ನಂತರ ಶ್ರೀಮನ್ನಾರಾಯಣನು ಗಯಾಸುರನ ಮೇಲೆ ತನ್ನ ದಿವ್ಯ ಪಾದವನ್ನಿಡಲು ತಕ್ಷಣ ಅಸುರನು ಚಲನವಿಲ್ಲದೆ ಸುಮ್ಮನಾದನು. ಇಲ್ಲಿ ಶ್ರೀ ವಿಜಯದಾಸರು ತಮ್ಮ ಪಿತೃಕಾರ್ಯವನ್ನು ಮಾಡಿ –

**''ಧರ್ಮಶಿಲೆಯ ಮೇಲೆ ಮೆರೆವ ಮಣಿಯ ಪಾದ**
**ಅಸುರ ಗಯನ ಮೆಟ್ಟಿ ನಿಂದ ಪಾದ**
**ಎಸೆವ ಹದಿನೆಂಟು ಪಾದದೊಳಿಪ್ಪ ಪಾದ।**

**ಜಗವೆಲ್ಲ ವ್ಯಾಪಿಸಿದ ಬಲು ಅತೀಂದ್ರಿಯ ಪಾದ**
**ಹಗೆಗಳ ಮಸ್ತಕಾದ್ರಿಗೆ ವಜ್ರ ಪ್ರಹಾರ ಪಾದ**
**ಫಲ್ಗುಣಿ ತೀರದಿ ಮೆರೆವ ಮಹತ್ತು ಪಾದ**
**ಫಲ್ಗುಣಿ ಸಾರಥಿ ವಿಜಯ ವಿಠಲನ ಪಾದ ॥**

ಗಯಾ ಕ್ಷೇತ್ರದಲ್ಲಿ ಶ್ರೀ ವಿಷ್ಣು ಪಾದವನ್ನು ಕುರಿತು ಹಾಡಿರುವವರು ಶ್ರೀ ವಿಜಯದಾಸರು. ಗಯಾ ಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ಮಾಡಲ್ಪಟ್ಟ ಪಿಂಡ ಪ್ರದಾನವು ಬಹಳ ಶ್ರೇಷ್ಠವಾದದ್ದು. ಪಿತೃಗಳಿಗೆ ವೈಕುಂಠ ಪ್ರಾಪ್ತವಾಗುವದೆಂಬುವರು. ಗದಾಧರನ ದರ್ಶನ, ಅಲ್ಲಿರುವ ವಟವೃಕ್ಷದ ದರ್ಶನ ಬಹಳ ಶ್ರೇಷ್ಠವಾದದ್ದು, ಇಲ್ಲೇ ಸಮೀಪದಲ್ಲಿ ಬುದ್ಧಗಯಾ ಎಂದು ಒಂದು ಸ್ಥಳವಿದೆ. ಕೆಲ ಜನರು ಅಲ್ಲಿ ನೋಡಿಕೊಂಡು ಬರುವರು.

ಅಯೋಧ್ಯಾ, ಮಥುರಾ, ಮಾಯಾ, ಕಾಶಿ, ಕಾಂಚಿ, ಅವಂತಿಕಾ, ಪುರಿ, ದ್ವಾರಾವತಿ ಚೈವ ಸಪ್ತಯಿತಾ ಮೋಕ್ಷದಾಯಕಾ। ಎಂದು ಅಂದಿದ್ದಾರೆ ಈ ಸಪ್ತಕ್ಷೇತ್ರಗಳಲ್ಲಿ ಒಂದಾದ ಮಥರಾ ಕುರಿತು.

## ಮಥುರ ಕ್ಷೇತ್ರ

ಮಥುರಾ ಕ್ಷೇತ್ರವು ಪ್ರಾತಃಸ್ಮರಣೀಯವಾದದ್ದು. ಇಲ್ಲಿ ಶ್ರೀ ಕೃಷ್ಣನ

ಜನ್ಮಸ್ಥಳವಾದದ್ದು. ಇಲ್ಲೇ ಸಮೀಪದಲ್ಲಿ ಶ್ರೀ ಕೃಷ್ಣನು ಒಂದೇ ಬೆರಳಿನಿಂದ ಎತ್ತಿದ ಗೋವರ್ಧನ ಪರ್ವತವಿದೆ. ಇಲ್ಲಿ ಸಮೀಪದಲ್ಲಿರುವ ಬೃಂದಾವನವು ಶ್ರೀ ಕೃಷ್ಣ ಪರಮಾತ್ಮನ ಬಾಲ ಲೀಲಾ ವಿಶೇಷಾದಿಗಳಿಂದ ಸಜ್ಜನರನ್ನುಗೋಪಿಕಾಸ್ತ್ರೀಯರನ್ನು ಆನಂದ ಸಾಗರದಲ್ಲಿ ಮುಳುಗಿಸಿದ ಪಾವನವಾದ ಗೋಕುಲ ಬೃಂದಾವನವು ಪರಮ ಸುಂದರವಾಗಿದೆ. ಶ್ರೀ ಕೃಷ್ಣ ಪರಮಾತ್ಮ ಓಡಾಡಿದ ಸ್ಥಳವು ಶ್ರೀ ಹರಿ ಅನೇಕ ದುಷ್ಟ ರಾಕ್ಷಸರನ್ನು ಸಂಹರಿಸಿ ಸಜ್ಜನರನ್ನು ಉದ್ಧಾರ ಮಾಡಿದನು.

"ಆಧೌ ದೇವಕೀ ದೇವಿ ಗರ್ಭ ಜನನಂ। ಗೋಪೀಗೃಹೇ ವರ್ಧನಂ।
ಮಾಯಾಪೂತನಿ ಜೀವಿತಾಪಹಾರಂ। ಗೋವರ್ಧನೋದ್ಧಾರಣಂ।
ಕಂಸಚ್ಛೇದನ ಕೌರವಾದಿ ಹನನಂ। ಕುಂತೀಸುತಾಪಾಲನಂ।
ಏತತ್ ಭಾಗವತ ಪುರಾಣ ಕಥನಂ। ಶ್ರೀಕೃಷ್ಣ ಲೀಲಾಮೃತಂ॥

ಅಂದಿದ್ದಾರೆ ಹಿರಿಯರು. ಪವಿತ್ರವಾದ ಯಮುನೆಯಲ್ಲಿ ವಿಧಿಪೂರ್ವಕ ಸ್ನಾನಾದಿಗಳನ್ನಾಚರಿಸಿ ಸುಂದರವಾದ ಮಥುರಾನಾಥನ ದಿವ್ಯದರ್ಶನ ಪಡೆದು ಪ್ರಸಾದ ಸ್ವೀಕರಿಸಿ ಮುಕ್ತಿಯನ್ನು ಪಡೆಯತಕ್ಕದ್ದು. ಅಲ್ಲಿಗೆ ಸಮೀಪದಲ್ಲಿ ಅಗ್ರ ಎಂಬ ಭವ್ಯ ಪಟ್ಟಣದಲ್ಲಿ ಶ್ರೀ ಕೃಷ್ಣನ ಮಂದಿರವು ಇದೆ.

## ಅಯೋಧ್ಯಾ

ಸಪ್ತ ಕ್ಷೇತ್ರಗಳಲ್ಲಿ ಒಂದಾದ ಮತ್ತು ಮೋಕ್ಷ ಪ್ರದವಾದ ಶ್ರೀರಾಮನ ಜನ್ಮಸ್ಥಾನವಾದ ಅಯೋಧ್ಯಕ್ಕೆ ಬಂದು ಅಲ್ಲಿ ಪವಿತ್ರವಾದ ಸರಯೂನದಿಯಲ್ಲಿ ವಿಧಿಪೂರ್ವಕ ಮಿಂದು ಶ್ರೀ ರಾಮಚಂದ್ರದೇವರ ಧ್ಯಾನಮಾಡತಕ್ಕದ್ದು.

'ರಾಮ ಮಂತ್ರವ ಜಪಿಸೋ ಹೇ ಮನುಜ
ಆ ಮಂತ್ರ ಈ ಮಂತ್ರ ಜಪಿಸಿ ಕೆಡಲು ಬೇಡ
ಸೋಮಶೇಖರ ತನ್ನ ಭಾಮೆಗೆ ಪೇಳಿದ ಮಂತ್ರ
ಜ್ಞಾನನಿಧಿ ನಮ್ಮ ಆನಂದ ತೀರ್ಥರು
ಸಾನುರಾಗದಿ ಹೇಳಿದ ಮಂತ್ರ
ಭಾನುಕುಲಾಂಬುಧಿ ಸೋಮನೆನಿಪ ಮಂತ್ರ
ದೀನರಕ್ಷಕ ಪುರಂದರ ವಿಠಲನ ಮಂತ್ರ

ಅಂದಿದ್ದಾರೆ ದಾಸ ಪಿತಾಮಹರಾದ ಪುರಂದರದಾಸರು. ಶ್ರೀ ರಾಮನು ರಾವಣನ ಸಂಹರಿಸಿ ಸೀತಾಮಾತೆಯೊಂದಿಗೆ ಸುಭಿಕ್ಷವಾಗಿ ರಾಮರಾಜ್ಯವಾಳಿದನು. ಸೀತಾರಾಮನು ಪರಿವಾರದೊಂದಿಗೆ ಸರಯೂ ನದಿಯಲ್ಲಿ ಇಳಿದು ಪರಂಧಾಮಕ್ಕೆ ಹೋದೆನೆಂದು, ಆ ಸಮಯದಲ್ಲಿ ಮುಕ್ತ ಜೀವರೆಲ್ಲರು ಮತ್ತು ಮುಕ್ತಿ ಜೀವಿಗಳಾದ ಕ್ರಿಮಿಕೀಟಕ ಪಕ್ಷಿಗಳು ಸಹಾ ರಾಮನೊಂದಿಗೆ ಹೊರಟರೆಂದು ಪುರಾಣವಾಕ್ಯ. ಪುಣ್ಯತಮವಾದ ಸರಯೂ ನದಿಯಲ್ಲಿ ಸ್ನಾನಾದಿಗಳನ್ನು ಆಚರಿಸಿ ರಾಮಜನ್ಮ ಭೂಮಿ ಸಂದರ್ಶಿಸುವುದು ಪರಮ ಪುಣ್ಯಕರವಾದದ್ದು. ರಾಮಕೃಷ್ಣ ಅವತಾರಗಳು ಧರ್ಮ ಸತ್‌ಕರ್ಮ ಬಲ ಶೌರ್ಯ ವೀರಧೀರ ಮೊದಲಾದ ಅನೇಕ ಸದ್ಗುಣಗಳು ನೋಡಿದರೇ ವೇದವ್ಯಾಸ, ಪರಶುರಾಮ, ಕಪಿಲ ನಾಮಕ ವಾಸುದೇವ ದತ್ತಾತ್ರೇಯ ಅವತಾರಗಳು ಜ್ಞಾನಸ್ವರೂಪರು.

## ನೈಮಿಷಾರಣ್ಯ

ಉತ್ತರಪ್ರದೇಶದ ಲಕ್ನೋ ಎಂಬ ಊರಿಗೆ ಸ್ವಲ್ಪ ದೂರದಲ್ಲಿ ಗೋಮತೀ ತೀರದಲ್ಲಿರುವ ನೈಮಿಷಾರಣ್ಯವು ಬಹಳ ಶ್ರೇಷ್ಠವಾದ ಕ್ಷೇತ್ರ. ಇಲ್ಲಿ ಸೂತ ಪುರಾಣಿಕರು, ಶೌನಕ ಮೊದಲಾದ ಅನೇಕ ಋಷಿಗಳಿಗೆ ಭಾಗವತ ಮೊದಲಾದ ಅನೇಕ ಪುರಾಣಗಳು ಹೇಳಿರುವರು. ಮತ್ತು ತತ್ತ್ವಜ್ಞಾನಗಳೊಂದಿಗೆ ಸದಾ ಜ್ಞಾನ ಸತ್ರವನ್ನು ನಡೆಸಿದ ಪರಮ ಪವಿತ್ರವಾದ ಜಾಗ. ಇಂದಿಗೂ ಇಲ್ಲಿ ವಿದ್ವಾಂಸರು ಭಾಗವತ ಪುರಾಣ ಹೇಳುವ ರೂಢಿ ಉಂಟು.

## ದೆಹಲಿ

ನಂತರ ನಮ್ಮ ಭಾರತ ದೇಶದ ಮುಖ್ಯ ಪಟ್ಟಣವಾದ (ರಾಜಧಾನಿಗೆ) ದೆಹಲಿಗೆ ಬರತಕ್ಕದ್ದು. ಇದು ಧರ್ಮರಾಜ ಧರ್ಮದಿಂದಾಳಿದ ದೊಡ್ಡ ಪಟ್ಟಣ. ಇದಕ್ಕೆ ಹಸ್ತಿನಾಪುರವೆಂದು ಪುರಾಣ ಕಾಲದ ಹೆಸರು. ಇಲ್ಲಿ ಹಳೇಕಾಲದ ರಾಜ ಚಿಹ್ನೆಗಳಿವೆ. ಇಲ್ಲಿ ಸಮೀಪದಲ್ಲಿ ಯುಮುನಾನದಿ ಇದೆ. ಪವಿತ್ರವಾದ ಯಮುನೆಗೆ ಕಾಳಿಂದಿ ಎಂದು ಕೂಡಾ ಹೆಸರುಂಟು.

## ಕುರುಕ್ಷೇತ್ರ

ದೆಹಲಿಯಿಂದ ಹರಿದ್ವಾರಕ್ಕೆ ಹೊರಡುವ ಮಾರ್ಗದಲ್ಲಿ ಕುರುಕ್ಷೇತ್ರ ಇರುವುದು.

'ಧರ್ಮಕ್ಷೇತ್ರೇ ಕುರುಕ್ಷೇತ್ರೇ' ಎಂದು ಭರತ ಖಂಡದಲ್ಲಿ ಪವಿತ್ರವಾದ ಕ್ಷೇತ್ರಗಳಲ್ಲಿ ಒಂದಾಗಿದೆ. ಇದು ಕುರುಪಾಂಡವರ ಯುದ್ಧ ನಡೆದ ಜಾಗ. ಗೀತೋಪದೇಶ ಮಾಡಿದ ಪವಿತ್ರ ಸ್ಥಳವಾಗಿದೆ. ಹರಿಸರ್ವೋತ್ತಮ ವಾಯು ಜಿವೋತ್ತಮ ತತ್ತ್ವವು ಇಲ್ಲಿ ಪ್ರತಿಯೊಂದು ಕಣಗಳಲ್ಲೂ ತುಂಬಿ ತುಳುಕು ಪಾವನವಾದ ಸ್ಥಳವಾಗಿದೆ. ಇಲ್ಲಿ ಅನೇಕ ಪುಣ್ಯ ತೀರ್ಥಗಳುಂಟು. ಬ್ರಹ್ಮಸರ ಸೂರ್ಯಕುಂಡ ಮೊದಲಾದ ತೀರ್ಥಗಳಲ್ಲಿ ಶಾಸ್ತ್ರೋಕ್ತ ಮಿಂದು ನಿತ್ಯ ನೈಮಿತ್ತಿಕ ಕರ್ಮಗಳನ್ನಾಚರಿಸಿದರೆ ಮುಕ್ತಿ ಸಿಗುವುದು. ಇಲ್ಲಿ ಭೀಷ್ಮರು ಶರಪಂಜರದಲ್ಲಿ ಮಲಗಿದ ಜಾಗ, ಪಾಂಡವರ ಗುಡಿ, ಭೀಮಸೇನನ ಗದೆ ಮೊದಲಾದ ಅನೇಕ ಸಲಕರಣೆಗಳಿವೆ. ಇಲ್ಲೇ ಪರಮಾತ್ಮ ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿದ ಪವಿತ್ರ ಸ್ಥಳವಾಗಿದೆ.

## ಹರಿದ್ವಾರ

ನಂತರ ಹರಿದ್ವಾರಕ್ಕೆ ಹೋಗತಕ್ಕದ್ದು. ಅಲಕನಂದ, ಮಂದಾಕಿನಿ ಭಾಗೀರಥಿಯಿಂದ ಕೂಡಿದ ಇಲ್ಲಿ ಪವಿತ್ರಗಂಗೆಯಲ್ಲಿ ಮಿಂದು, ಸಂಜೆಗೆ ಇಲ್ಲಿ ಗಂಗಾಪೂಜೆಯನ್ನು ನೋಡಲು ಕಣ್ಣಿಗೆ ಹಬ್ಬದಂತಿರುವುದು. ಇಲ್ಲಿ ಮಂದಿರಗಳು ಅನೇಕ ಛತ್ರಗಳು ಇದ್ದು ಪ್ರಯಾಣಿಕರಿಗೆ ಬಹಳ ಅನುಕೂಲವಾಗಿದೆ. ಪವಿತ್ರವಾದ ಬದರಿಕಾಶ್ರಮಕ್ಕೆ ಈ ಜಾಗವು ದ್ವಾರವೆಂದು ಹರಿದ್ವಾರವೆಂದು ಹೆಸರು ಬಂದಿದೆ.

ಇಲ್ಲಿಂದ ವಿಶಾಲ ಬದರಿಗೆ ಹೋಗಬೇಕು. ಹಿಂದಿನ ಕಾಲದಲ್ಲಿ ಹರಿದ್ವಾರ ದಿಂದ 150 ಮೈಲು ಕಾಲ್ನಡಿಗೆಯಿಂದ ಯಾತ್ರಿಕರು ಹೋಗುತ್ತಿದ್ದರು. ಗುಡ್ಡ ಪ್ರದೇಶಗಳಲ್ಲಿ ಸಣ್ಣದಾದ ರಸ್ತೆಗಳಲ್ಲಿ ಆಕಾಶಕ್ಕೆ ಅಂಟಿದಹಾಗೆ ಮಂಜಿನ ಬೆಟ್ಟಗಳು ಪಾತಾಳಕ್ಕೆ ಹರಿಯುವ ಅಲಕನಂದ ನದಿ, ಸಣ್ಣದಾದ ದಾರಿಗಳಲ್ಲಿ ನಡೆದು ಹೋಗಿ ನಾರಾಯಣನ ದರುಶನ ಮಾಡಿಕೊಂಡು ಊರಿಗೆ ಬಂದು ಸೇರುವುದು ಅತಿ ಪ್ರಯಾಸವಾಗಿರುತ್ತಿತ್ತಂತೆ. ಈಗ ಬದರೀನಾರಾಯಣನ ಮಂದಿರದ ಹತ್ತಿರದವರಿಗೂ ವಾಹನಗಳು ಹೋಗುತ್ತವೆ. ಮಾರ್ಗದಲ್ಲಿ ಎಲ್ಲಾ ಅನುಕೂಲವಾಗಿದೆ. ಬದರಿಯಲ್ಲಿ ಶ್ರೀ ಪೇಜಾವರ ಮಠಾಧೀಶರು ಕಟ್ಟಿಸಿದ ಅನಂತ ಮಠವಿದೆ. ಜನರಿಗೆ ಬಹಳ ಸೌಕರ್ಯವಾಗಿದೆ.

## ಬದರಿ ಕ್ಷೇತ್ರ

ಪಾವನವಾದ ಅಲಕನಂದಾ ತೀರದಲ್ಲಿರುವ ಬದರಿ ಕ್ಷೇತ್ರವು ಪವಿತ್ರವಾದದ್ದು

ಭರತ ಖಂಡಾದಿಪನಾದ ಬದರೀ ನಾರಾಯಣನು ಸ್ವಯಂವ್ಯಕ್ತನು. ಇವನನ್ನು ಬ್ರಹ್ಮ ದೇವರು, ನಾರದರು ಪೂಜಿಸಿ ಹೋಗುವರೆಂದು ಪ್ರಸಿದ್ಧಿ. ಚಳಿ ಕಾಲದಲ್ಲಿ ಆರು ತಿಂಗಳು ಗುಡಿ ಬಾಗಿಲು ಮುಚ್ಚಿದರೂ ಗರ್ಭಗುಡಿಯಲ್ಲಿ ಬ್ರಹ್ಮ ದೇವರು ಹಚ್ಚುವ ಅಖಂಡ (ದೀಪ) ಸದಾ ಉರಿಯುತ್ತಲಿರುವುದು. ಅಕ್ಷತದಿಗೆ ದಿನ ಆ ಜ್ಯೋತಿ ದರ್ಶನಕ್ಕೆ ಗುಡಿ ಬಾಗಿಲು ತೆಗೆಯುವ ದಿನಕ್ಕೆ ಸಾವಿರಾರು ಭಕ್ತಾದಿಗಳು ಅಲ್ಲಿಗೆ ಹೋಗುವರು. ಇಲ್ಲಿ ಬದರಿನಾರಾಯಣನು ಪದ್ಮಾಸನನಾಗಿ ಕುಳಿತಿರುವನು. ಮೇಲಿನ ಕೈಗಳಲ್ಲಿ ಶಂಖ ಚಕ್ರವನ್ನು ಧರಿಸಿ, ದೇದೀಪ್ಯಮಾನವಾದ ಕಿರೀಟವನ್ನು ಧರಿಸಿ ಪೀತಾಂಬರ ಉಟ್ಟಿರುವನು. ಲಕ್ಷ್ಮೀ ಕುಬೇರ ನಾರದ ಗರುಡ ಮೊದಲಾದ ಪರಿವಾರ ಸುತ್ತು ಕೂತಿರುವರು. ಬದರಿ ನಾರಾಯಣಗೆ ಅಭಿಷೇಕವನ್ನು ಮಾಡಿಸಿ ಅರ್ಚನೆ ಆರತಿ ಮಾಡಿಸಿ ಪ್ರಸಾದವನ್ನು ತೆಗೆದುಕೊಳ್ಳಬೇಕು. ಇಲ್ಲಿ ನರನಾರಾಯಣರ ಪರ್ವತವಿದೆ. ಪವಿತ್ರವಾದ ಅಲಕನಂದಾ ತೀರದಲ್ಲಿರುವ ಬ್ರಹ್ಮ ಕಪಾಲದಲ್ಲಿ ಪಿತೃ ಕಾರ್ಯ ಮಾಡುವರು. ಗಯಾ ಕ್ಷೇತ್ರ ಮತ್ತು ಬದರಿ ಕ್ಷೇತ್ರದಲ್ಲಿ ಪಿತೃಕಾರ್ಯ ಮಾಡುವದು ಶ್ರೇಷ್ಠವಾದದ್ದು. ದೇವಋಣ, ಋಷಿ ಋಣ, ಪಿತೃಋಣ ತೀರಿಸಿದ ಪುಣ್ಯ ಫಲ ದೊರೆಯುವದೆಂಬುವರು ಹಿರಿಯರು. ಗಾಳಿ ಬೆಳಕು ನೀರು ಕೊಟ್ಟಿರುವ ದೇವರೂ ಶ್ರೀಮದಾಚಾರ್ಯರ ತತ್ತ್ವಜ್ಞಾನ ವೃದ್ಧಿಗೊಳಿಸಿ ಸಜ್ಜನರ ಉದ್ಧಾರ ಮಾಡುವ ಋಷಿ ಋಣ ಜನ್ಮಕೊಟ್ಟ ಮಾತಾಪಿತೃ ಋಣ ತೀರಿಸುವುದು. ದೊಡ್ಡ ಯಜ್ಞ ಮಾಡಿದ್ದಕ್ಕೂ ಹೆಚ್ಚುಫಲ. ಅದರಿಂದ ಶ್ರೇಯಸ್ಸು ವಂಶವೃದ್ಧಿ ಎನ್ನುತ್ತಾರೆ ಹಿರಿಯರು. ಇಂತಹ ಬದರಿಕಾಶ್ರಮದ ಯಾತ್ರೆ ಪವಿತ್ರವಾದ ಅಲಕನಂದಾ ಸ್ನಾನ ಜೀವಮಾನದಲ್ಲಿ ಒಮ್ಮೆಯಾದರೂ ವೈಷ್ಣವರು ಮಾಡಲೇಬೇಕಾದ ಯಾತ್ರೆ. ಪರಮಾತ್ಮನು ನಮಗೆ ಪಂಚಭೌತಿಕವಾದ ಈ ಸ್ಥೂಲ ಶರೀರ ಕೊಟ್ಟಿದ್ದಕ್ಕೆ ಶ್ರೀ ಹರಿಯಲ್ಲಿ ನಿರ್ಮಲವಾದ ದೃಢವಾದ ಸಾತ್ವಿಕ ಭಕ್ತಿಯನ್ನು ಜ್ಞಾನದಿಂದ ಕೂಡಿಕೊಂಡು ಮಾಡಬೇಕು. ಬದರಿ ಸುತ್ತಮುತ್ತ ಅನೇಕ ಪವಿತ್ರ ಸ್ಥಳಗಳಿವೆ. ಇಲ್ಲಿ ಸಮೀಪದಲ್ಲೀ ವಸುಧಾರಾ ಎಂದು ಅಲಕನಂದಾ ಧುಮುಕುವ ಪವಿತ್ರ ಜಾಗ ಇದೆ. ವೇದವ್ಯಾಸ ಗೃಹದಲ್ಲಿ ಶ್ರೀ ವೇದವ್ಯಾಸ ದೇವರು ಗಣೇಶನಿಂದ ಶ್ರೀ ಮನ್ಮಹಾಭಾರತವನ್ನು ಬರೆಸಿರುವ ಜಾಗವಿದೆ.

ಶ್ರೀಮದಾಚಾರ್ಯರು ಉಡುಪಿಯಿಂದ ಎರಡು ಸಲ ಬದರಿ ಕ್ಷೇತ್ರಕ್ಕೆ ಹೋಗಿ ಅಲ್ಲಿ ಬದರಿ ವೃಕ್ಷ (ಬೋರೇಗಿಡ)ದ ಕೆಳಗೆ ಕೂತಿರುವ ಮಹಾನುಭಾವರಾದ ಶ್ರೀ ವೇದವ್ಯಾಸರ ಹತ್ತಿರ ಉತ್ಕೃಷ್ಟ ಗ್ರಂಥಗಳ ವ್ಯಾಸಂಗ ಮಾಡಿರುವರು. ಶಿಷ್ಯರಿಂದ

ಹೊರಡುವಾಗ ದಾರಿಯಲ್ಲಿ ಅನೇಕ ಮಹಿಮೆಗಳನ್ನು ಸಜ್ಜನರಿಗೆ ತೋರಿಸಿದರು. ಜೀವೋತ್ತಮರಾದ ಶ್ರೀಮದಾಚಾರ್ಯರು ಹರಿಸರ್ವೋತ್ತಮ ತತ್ವ ಸಾರುತ್ತಾ ಪಠಿಸುತ್ತಾ ಈಗ್ಲೂ ದೊಡ್ಡ ಬದರಿಯಲ್ಲಿರುವರು.

ಉತ್ತರದಲ್ಲಿ ಶಂಬಲವೆಂಬ ಪ್ರಸಿದ್ಧ ಸ್ಥಳವಿದೆ. ಕಲಿಯ ವಿಶೇಷ ಸ್ಥಾನವೆಂದು ಮುಂದೆ ಪರಮಾತ್ಮ ಕಲ್ಕಿ ಅವತಾರ ತಾಳಿ ದುಷ್ಟಶಿಕ್ಷಣ ಶಿಷ್ಯ ರಕ್ಷಣ ಮಾಡುವನೆಂದು ಪುರಾಣ ಪ್ರಸಿದ್ಧಿ.

## ಮಾತೃ ಗಯಾ

ಉತ್ತರದಲ್ಲೇ ಅಹ್ಮದಾಬಾದ್ ಹತ್ತಿರ ಮಾತೃ ಗಯಾ ಎಂಬ ಪವಿತ್ರ ಕ್ಷೇತ್ರವಿದೆ. ಇದಕ್ಕೆ ಸಿದ್ಧಪುರ ಎಂದು ಕೂಡಾ ಹೆಸರು. ಕರ್ದಮ ಋಷಿಗಳು ಮತ್ತು ದೇವ ಭೂತಿ ದೇವಿಯಲ್ಲಿ ಪರಮಾತ್ಮನು ಕಪಿಲ ವಾಸುದೇವನಾಗಿ ಅವತಾರ ತಾಳಿ ತಾಯಿಯಾದ ದೇವಭೂತಿ ದೇವಿಗೆ ಸಾಂಖ್ಯ ತತ್ತ್ವವನ್ನು ಲೋಕಕ್ಕೆ ತಿಳಿಸುವುದಕ್ಕಾಗಿ ತಾಯಿಗೆ ಉಪದೇಶ ಮಾಡುವನು. ಅನಾದಿಯಾದ ಜೀವನು ಕರ್ಮಾನುಸಾರ ನರಕ ಸ್ವರ್ಗ ಅನುಭವಿಸಿ ಆಕಾಶಮಾರ್ಗವಾಗಿ ಮೇಘದಲ್ಲಿ ಸೇರಿ ಅಲ್ಲಿಂದ ಮಳಿಯ ದ್ವಾರಾ ಭೂಮಿಗಿಳಿದು ಧಾನ್ಯದಲ್ಲಿ ಸೇರಿ ಆಹಾರದೊಂದಿಗೆ ಪುರುಷನ ಶರೀರದಲ್ಲಿ ಸೇರಿ ಅಲ್ಲಿಂದ ತಾಯಿ ಗರ್ಭಕ್ಕೆ ಜೀವ ಬರುವುದು.

ತಾಯಿ ಗರ್ಭದಲ್ಲಿ ನವಮಾಸಗಳಿದ್ದು ಅಲ್ಲಿ ಆ ಜೀವಕ್ಕೆ ಪೂರ್ವ ಜನ್ಮದ್ದೆಲ್ಲಾ ಸ್ಮರಣೆಗೆ ಬರುವುದು. ಗರ್ಭವಾಸದ ಕಷ್ಟ ಅನುಭವಿಸಿ ತಾಯಿ ಗರ್ಭದಿಂದ ಹೊರಗೆ ಭೂಮಿಗೆ ಬಂದು ಮತ್ತು ಯಥಾ ಪ್ರಕಾರ ಪ್ರಾರಬ್ಧ ಪಾಪ ಪುಣ್ಯಾದಿಗಳನ್ನು ಅನುಭವಿಸಬೇಕು.

ಮನುಷ್ಯನಾಗಿ ಹುಟ್ಟಿ ಬ್ರಾಹ್ಮಣ ದೇಹ ಬಂದಾಗ ಬ್ರಹ್ಮಾದಿ ಸಕಲ ದೇವತೆಗಳಿಂದ ಸ್ತುತ್ಯನಾದ ಶ್ರೀಹರಿಯನ್ನು ನಿರ್ಮಲ ಮನಸ್ಸಿನಿಂದ ದೃಢವಾದ ಜ್ಞಾನ ಭಕ್ತಿಯಿಂದ ಭಜಿಸಿ ಮುಕ್ತಿಯನ್ನು ಪಡೆಯಬೇಕು. ಎಂದು ಇನ್ನೂ ಅನೇಕ ತತ್ತ್ವಗಳನ್ನು ಕಪಿಲನಾಮಕ ಪರಮಾತ್ಮನು ತಾಯಿಗೆ ಉಪದೇಶ ಮಾಡಿ ಶಂಖ ಚಕ್ರ ಗದಾಪದ್ಮ ಪೀತಾಂಬರಧಾರಿಯಾಗಿ ದೇದೀಪ್ಯನಾದ ತೇಜಸ್ಸಿನಿಂದ ಕೂಡಿದವನಾಗಿ ತಾಯಿಗೆ ದರುಶನ ಕೊಟ್ಟು ಅಂತರ್ಧಾನವಾದ ಜಾಗ ಮಾತೃಗಯಾ. ನಂತರ ದೇವಭೂತಿ ದೇವಿ ಸರಸ್ವತಿ ನದಿಯಾಗಿ ಹರಿದು ಮುಕ್ತಿಯನ್ನು ಪಡೆದುಕೊಂಡಳು. ಅಲ್ಲೇ

ಜಿಂದು ಸರೋವರವಿದೆ. ಇಲ್ಲಿ ತಾಯಿಗೆ ಪಿಂಡಪ್ರದಾನ ಅವಶ್ಯ ಮಾಡತಕ್ಕದ್ದು. ಅಲ್ಲಿಗೆ ತಾಯಿ ಋಣ ತೀರುವುದು ಎನ್ನುವರು. ಉತ್ತರದಲ್ಲೇ ಪವಿತ್ರವಾದ ನರ್ಮದಾ ನದಿ ಸ್ನಾನವು ಬಹಳ ಶ್ರೇಷ್ಠವಾದದ್ದು. ಸಿದ್ಧಪುರದಲ್ಲಿ ದೇವಭೂತಿ ದೇವಿ ಸಿದ್ಧಿಯನ್ನು ಪಡೆದಿರುವುದರಿಂದ ಈ ಊರಿಗೆ ಸಿದ್ಧಪುರವೆಂದು ಹೆಸರು ಬಂದಿತು. ಮಾತೃದೇವೋಭವ ಎಂಬ ಪದ ಇಲ್ಲಿ ಕಪಿಲಾಖ್ಯಸ್ವಾಮಿ ತಿಳಿಸಿರುವನೆಂದು ತೋರುವುದು.

## ದ್ವಾರಕಾ ಕ್ಷೇತ್ರ

ನಂತರ ಪಶ್ಚಿಮಕ್ಕೆ ದ್ವಾರಕಾ ಕ್ಷೇತ್ರಕ್ಕೆ ಹೋಗಿ ಗೋಮತಿ ನದಿ ಸಮುದ್ರಕ್ಕೆ ಸೇರುವ ಸಂಗಮವಿದೆ. ಅಲ್ಲಿ ಶಾಸ್ತ್ರೋಕ್ತವಾಗಿ ಮಿಂದು ದ್ವಾರಕಾ ಕೃಷ್ಣನ ದಿವ್ಯ ದರ್ಶನ ಪಡೆದು ಪ್ರಸಾದ ಸ್ವೀಕರಿಸತಕ್ಕದ್ದು. ಇಲ್ಲಿ ಕೃಷ್ಣನ ವಿಗ್ರಹವು ಅತಿ ಸುಂದರವಾಗಿದೆ. ಈ ಸಂಗಮ ಹತ್ತಿರ ಸ್ನಾನಾದಿಗಳು ಬಹಳ ಶ್ರೇಷ್ಠ. ಇಲ್ಲಿ ಹೇರಳವಾಗಿ ಚಕ್ರಾಂಕಿತಗಳು ಸಿಗುತ್ತವೆ. ಈ ಚಕ್ರಾಂಕಿತವನ್ನು ಪೂಜಾ ಪೆಟ್ಟಿಗೆಯಲ್ಲಿಟ್ಟು ಅವಶ್ಯ ಪೂಜಿಸತಕ್ಕದ್ದು. ಏಕ ಎಂಬ ಸ್ಟೇಷನ್‌ನಲ್ಲಿಳಿದು ದ್ವಾರಕೆಗೆ ಹೋಗಬೇಕು. ಅಲ್ಲೇ ನಾವಿಯಲ್ಲಿ ಹೋಗಿ ಬೇಟ ದ್ವಾರಕ ನೋಡತಕ್ಕದ್ದು. ಅಲ್ಲೆಲ್ಲಾ ಶ್ರೀ ಕೃಷ್ಣನು ಓಡಾಡಿದ ಪವಿತ್ರಸ್ಥಳ, ಈಗ ಬಹುಭಾಗ ಸಮುದ್ರದಲ್ಲಿ ಮುಳುಗಿ ಹೋಗಿದೆ. ಕುಶಾಸುರನೆಂಬ ದೈತ್ಯನನ್ನು ಸಂಹರಿಸಿ ಅವನ ಮೇಲೆ ದ್ವಾರಕಾಪಟ್ಟಣವನ್ನು ಶ್ರೀಕೃಷ್ಣನು ನಿರ್ಮಿಸಿದನು. ದ್ವಾರಕಾ ಕ್ಷೇತ್ರದಲ್ಲಿ ಗೋಪಿ ಚಂದನ ಸರೋವರ ಮತ್ತು ಚಕ್ರತೀರ್ಥವಿದೆ. ಅಲ್ಲಿ ಸುತ್ತಮುತ್ತ ಕೆಲವು ಕ್ಷೇತ್ರಗಳನ್ನು ನೋಡಿಕೊಂಡು ಅಲ್ಲಿಂದ ಬ್ರಹ್ಮ ಪುಷ್ಕರಕ್ಕೆ ಬರತಕ್ಕದ್ದು.

## ಬ್ರಹ್ಮ ಪುಷ್ಕರ

ಬ್ರಹ್ಮದೇವರಿಂದ ನಿರ್ಮಿತವಾದುದರಿಂದ ಮತ್ತು ಬ್ರಹ್ಮದೇವರ ನಾಸಿಕದಿಂದ ಅವತರಿಸಿದ ಆದಿವರಾಹ ದೇವರು ಈ ಪುಷ್ಕರದಲ್ಲಿ ಪ್ರವೇಶಿಸಿರುವುದರಿಂದ ಎಲ್ಲಾ ತೀರ್ಥಕಿಂತಲು ಶ್ರೇಷ್ಠವಾದದ್ದು.

ಬ್ರಹ್ಮ ಪುಷ್ಕರಕ್ಕೆ ಅಜಮೀರ್ ಎಂದೂ ಕೂಡಾ ಹೆಸರು. ಇಲ್ಲಿ ಶ್ರೇಷ್ಠವಾದ ಬ್ರಹ್ಮ ಪುಷ್ಕರದಲ್ಲಿ ಸ್ನಾನಾದಿಗಳನ್ನಾಚರಿಸಿ ಬ್ರಹ್ಮ ದೇವರ ದರ್ಶನ ಪಡೆಯತಕ್ಕದ್ದು. ಭೃಗುಋಷಿಗಳ ಶಾಪ ಇರುವುದರಿಂದ ಅಜಮೀರ್‌ನಲ್ಲಿ ಬಿಟ್ಟರೆ ಬೇರೆ ಎಲ್ಲೂ ಬ್ರಹ್ಮನ

ಗುಡಿ ಇಲ್ಲ. ಪುಣ್ಯ ಕ್ಷೇತ್ರಗಳ ಯಾತ್ರೆ ಮಾಡುವಾಗ ಶಾಸ್ತ್ರೋಕ್ತ ಸ್ನಾನ ದೇವರ ಸಂದರ್ಶನ ಅರ್ಚನ ಸೇವನ, ಪಿಂಡ ಪ್ರದಾನ, ದಾನ ಧರ್ಮಗಳನ್ನಾಚರಿಸತಕ್ಕದ್ದು; ವಿಹಿತ ಧರ್ಮವಾಗಿದೆ.

**"ಸತ್ಪಾತ್ರ ದೊರೆತಾಗ ಸದ್ಬುದ್ಧಿ ಇದ್ದಾಗ**
**ಸಂಪ್ರದಾಯಾನುಸಾರ ದ್ರವ್ಯಾನುಕೂಲವಿರುವಾಗ**
**ಹಿಂದೆ ಮುಂದೆ ನೋಡದೆ ದಾನ ಮಾಡು ಮನುಜ"**

ಎನ್ನುತಾರೆ ಹಿರಿಯರು. ಅನಾಚಾರಗಳಿಂದ ಯಾತ್ರೆ ಮಾಡಬಾರದು. ಶಾಸ್ತ್ರಾರ್ಥ ತಿಳಿದುಕೊಂಡು ಶ್ರದ್ಧಾಭಕ್ತಿಯಿಂದ ಮಾಡತಕ್ಕದ್ದು.

## ಪ್ರಭಾಸ ಕ್ಷೇತ್ರ

ಪೂರ್ವ ಭಾಗದಲ್ಲಿ ಪ್ರಭಾಸ ಕ್ಷೇತ್ರವಿರುವುದು. ಶ್ರೀ ಕೃಷ್ಣ ಪರಮಾತ್ಮನು ಇಲ್ಲಿಂದಲೇ ಪರಂಧಾಮಕ್ಕೆ ಹೊರಟಿರುವ ಪವಿತ್ರ ಸ್ಥಳವಿದು. ಇಲ್ಲಿ ಪಂಚ ಮಹಾನದಿಗಳು ಬಂದು ಸಮುದ್ರಕ್ಕೆ ಸೇರುವ ಸಂಗಮವಿದೆ. ಸೂರ್ಯನ ದೇವಸ್ಥಾನವಿದೆ. ಈ ಪ್ರಭಾಸ ಕ್ಷೇತ್ರದಲ್ಲಿ ಒಂದು ವೃಕ್ಷದ ಕೆಳಗೆ ಕಟ್ಟೆ ಮೇಲೆ ಶ್ರೀ ಕೃಷ್ಣನು ಮಲಗಿರಲು ಒಬ್ಬ ವ್ಯಾಧನು ಕೃಷ್ಣನ ಕಾಲು ಮೀನು ಎಂದು ಭಾವಿಸಿ ಬಾಣ ಬಿಟ್ಟನಂತೆ. ಆ ಬಾಣವು ತಗುಲಿದ ನೆಪ ಮಾತ್ರದಿಂದ ಕೃಷ್ಣಾವತಾರ ಮುಗಿಯಿತು ಎಂದು. ಆ ವ್ಯಾಧನು ಹಿಂದೆ ರಾಮಾವತಾರದಲ್ಲಿ ವಾಲಿಯಾಗಿ ಇದ್ದನಂತೆ. ರಾಮದೇವರು ವಾಲಿಯನ್ನು ಹಿಂದಿನಿಂದ ಬಾಣ ಬಿಟ್ಟು ಸಂಹರಿಸಿರುವುದರಿಂದ ಮುಂದೆ ಕೃಷ್ಣಾವತಾರದಲ್ಲಿ ರಾಮದೇವರ ವರದಿಂದ ವಾಲಿ ವ್ಯಾಧನಾಗಿ ಹುಟ್ಟಿ ಕೃಷ್ಣನ ಪಾದ ಮೀನು ಎಂದು ಹೊಳೆದಂತೆ ಕಾಣಿಸಿರುವುದರಿಂದ ಆ ವ್ಯಾಧನು ಬಾಣ ಬಿಡುವನು. ಅದೇ ನೆಪದಿಂದ ಪರಮಾತ್ಮನು ಪರಂಧಾಮಕ್ಕೆ ಹೋದನಂತೆ. ದೇವತೆಗಳು ಎರಡೆರಡು ರೂಪಗಳಿಂದ ದೇವತಾ ಕಾರ್ಯಗಳು ಮಾಡುವರೆಂದು ಪುರಾಣ ವಾಕ್ಯ. ಆ ವ್ಯಾಧನು ವಾಲಿ ಅಲ್ಲ ಭೃಗುಋಷಿಗಳು ಎಂದು ಪ್ರಮಾಣ ವಾಕ್ಯವಿರುವುದು ಎಂದು ಹೇಳಿದರು ಹಿರಿಯರು.

ಪ್ರಭಾಸ ಕ್ಷೇತ್ರದಲ್ಲಿ ಆ ವೃಕ್ಷದ ಹತ್ತಿರ ಕುಳಿತು ಪಂಡಿತರು ದಶಮಸ್ಕಂದ ಭಾಗವತ ಪಾರಾಯಣ ಮಾಡುವ ರೂಢಿ ಉಂಟು. ಇಲ್ಲಿಗೆ ಮೂರು ಮೈಲು ದೂರದಲ್ಲಿ ವೀರಾವಲಿ ಎಂದು ರೈಲು ನಿಲ್ದಾಣವಿದೆ. ಅಲ್ಲಿ ಸಮುದ್ರ ತೀರದಲ್ಲಿ ಸೋಮನಾಥೇಶ್ವರನ ದೇವಸ್ಥಾನವಿರುವುದು.

# ಜಗನ್ನಾಥಪುರ , ಪಾಮೇಶ್ವರ ಕ್ಷೇತ್ರ

ದಕ್ಷಿಣಕ್ಕೆ ಕಲ್ಕತ್ತ ಹತ್ತಿರ ಗಂಗೆಯು ಬಹುಮುಖವಾಗಿ ಹರಿದು ಬಂದು ಸಮುದ್ರ ಸೇರುವಳು. ಕಲ್ಕತ್ತ ಬಹುದೊಡ್ಡ ಪಟ್ಟಣ. ಇದು ಒಂದು ದೊಡ್ಡ ವ್ಯಾಪಾರಸ್ಥಳ. ಇಲ್ಲಿ ರುದ್ರ ದೇವಸ್ಥಾನ, ಕಾಳಿದೇವಿ ಗುಡಿ ಇದೆ. ಇಲ್ಲಿಗೆ ಸಮೀಪದಲ್ಲಿ ಭುವನೇಶ್ವರ ಕೋನಾರ್ಕ್ ಎಂಬ ಕ್ಷೇತ್ರಗಳುಂಟು.

ಇಲ್ಲಿಗೆ ಸಮೀಪದಲ್ಲಿ ಜಗನ್ನಾಥಪುರ ಎಂಬ ಪವಿತ್ರ ಕ್ಷೇತ್ರವಿದೆ. ಇಲ್ಲಿ ಒಂದು ಮರದ ದೊಡ್ಡ ದಿಮ್ಮಿ ಸಮುದ್ರದಲ್ಲಿ ತೇಲಿ ಬರಲಾಗಿ ದೇವ ಶಿಲ್ಪಿಯಾದ ವಿಶ್ವಕರ್ಮನು ಆ ದಿಮ್ಮಿಯನ್ನು ಕಡಿದು ಶ್ರೀ ಕೃಷ್ಣ ಬಲರಾಮ ಮತ್ತು ಸುಭದ್ರಾಮೂರ್ತಿಗಳನ್ನು ಮಾಡಿದನಂತೆ. ಆ ಮೂರ್ತಿಗಳು ಪೂಜೆಗೊಳ್ಳುತ್ತಿರುವ ಪುರಿ ಜಗನ್ನಾಥದಲ್ಲಿ, ಬಹಳ ದೊಡ್ಡ ಪ್ರಾಚೀನ ದೇವಸ್ಥಾನವಿರುವುದು.

ದಕ್ಷಿಣ ದಿಕ್ಕಿನಲ್ಲಿ ರಾಮೇಶ್ವರವು ಮಹಾ ಕ್ಷೇತ್ರವೆನಿಸಿಕೊಂಡಿದೆ. ಉತ್ತರಕ್ಕೆ ಬದರಿಕಾಶ್ರಮ, ಪೂರ್ವಕ್ಕೆ ಪುರಿ, ಜಗನ್ನಾಥ, ಪಶ್ಚಿಮಕ್ಕೆ ದ್ವಾರಕಾ ಇರುವುದು; ರಾಮೇಶ್ವರದಲ್ಲಿ ಶ್ರೀರಾಮ ಪ್ರತಿಷ್ಠಿತವಾದ ರಾಮಲಿಂಗೇಶ್ವರನ ದರುಶನ ಮಾಡತಕ್ಕದ್ದು. ಈ ಗುಡಿ ಬಹಳ ದೊಡ್ಡದಾಗಿದೆ. ಈ ಗುಡಿಯಲ್ಲಿ ಅನೇಕ ತೀರ್ಥಗಳಿವೆ, ಅಲ್ಲಿ ಸ್ನಾನ ಮಾಡತಕ್ಕದ್ದು.

**''ಕೃತ್ತಿ ವಾಸನೆ ಹಿಂದೆ ನೀನಾಲ್ವತ್ತಕುಲ್ಪ ಸಮೀರನಲಿ**
**ಶಿಷ್ಯತ್ವ ವಹಿಸ್ಯಖಿಳಾಗ ಮಾರ್ಥಗಳೋದಿ ಧರೆಯೋಳು।**
**ಹತ್ತು ಕಲ್ಪದಿ ತಪವ ಗೈದಾದಿತ್ಯರೊಳುಗುತ್ತಮ ನೆನಿಸಿ।**
**ಪುರುಷೋತ್ತಮನ ಪರಿಯಂಕ ಪದ ವೈದಿಯೋ ಮಹಾದೇವ।**

ಎಂದು ಜಗನ್ನಾಥ ದಾಸರು ಹರಿಕಥಾಮೃತಸಾರದಲ್ಲಿ ಮನೋನಿಯಾಮಕರಾದ ರುದ್ರದೇವರನ್ನು ಸ್ತುತಿಸಿರುವರು.

ಉತ್ತರ ಪ್ರದೇಶದಲ್ಲಿರುವ ಹರಿದ್ವಾರದಿಂದ ಶುದ್ಧ ಗಂಗೋದಕವನ್ನು ತಂದು ದಕ್ಷಿಣದಲ್ಲಿರುವ ರಾಮಲಿಂಗೇಶ್ವರನಿಗೆ ಅಭಿಷೇಕ ಮಾಡುವುದು ಬಹಳ ಶ್ರೇಷ್ಠವಾದುದು. ಅಭಿಷೇಕ ಪ್ರಿಯ ಮಹಾರುದ್ರದೇವರು. ಯಾರಿಗಾದರೂ ಅನಾರೋಗ್ಯವಾದರೆ ರುದ್ರಾಭಿಷೇಕ ಮಾಡಿಸುವ ರೂಢಿ ಉಂಟು.

ಅಲಂಕಾರ ಪ್ರಿಯ ಶ್ರೀಹರಿ, ಪರಮಾತ್ಮಗೆ ಬೆಳ್ಳಿ, ಬಂಗಾರ, ವಜ್ರ, ವೈಡೂರ್ಯ, ಪುಷ್ಪ, ಗಂಧ, ತುಳಸಿ ಶಕ್ತ್ಯಾನುಸಾರ ಅಲಂಕರಿಸಿ ಪೂಜಿಸತಕ್ಕದ್ದು. ತುಳಸಿ ಮಾತ್ರ ಇದ್ದೇ ಇರಬೇಕು.

''ತುಳಸಿಯಿಲ್ಲದ ಪೂಜೆ ಒಲ್ಲನೋ ಹರಿ ಕೊಳ್ಳನೋ'' ಅಂದಿದ್ದಾರೆ ಹರಿದಾಸರು. ದೊಡ್ಡದಾಗಿ ಪೂಜಿಸಲು ಶಕ್ತಿ ಇಲ್ಲದಿದ್ದರೆ, ಒಂದು ದಳ ಶ್ರೀ ತುಳಸಿ ಬಿಂದು ಗಂಗೋದಕ ಇಂದಿರಾರಮಣಗರ್ಪಿಸಿದರೆ ಸಾಕು ಭಕ್ತಿಯಿಂದ ಅಂದಿದ್ದಾರೆ ಹಿರಿಯರು. ಇನ್ನು ''ಸುಲಭ ಪೂಜೆಯ ಮಾಡಿ ಫಲವಿಲ್ಲದವರು' ಅಂದಿದ್ದಾರೆ ದಾಸರು. ಪರಮಾತ್ಮನು ನಿರ್ಮಲ ಭಕ್ತಿಗೆ ಒಲಿದಷ್ಟು ಬೇರೆ ಯಾತಕ್ಕೂ ಒಲಿಯುವುದಿಲ್ಲ. ಅವನು ನಿತ್ಯ ತೃಪ್ತನು. ಭಗವಂತನ ಪೂಜೆ ನೈವೇದ್ಯ ಮಾಡುವ ಸಲಕರಣೆಗಳು ಪಾತ್ರೆ ಮೊದಲಾದವು ಬೆಳ್ಳಿ ಇಲ್ಲವಾದರೆ ಹಿತ್ತಾಳೆ, ತಾಮ್ರ ಉಪಯೋಗಿಸಬೇಕು. ಸ್ಟೀಲು, ಕಬ್ಬಿಣ ಉಪಯೋಗಿಸಬಾರದು.

ಇನ್ನು ಹರಿ ಧ್ಯಾನಪ್ರಿಯ, ಬ್ರಹ್ಮದೇವರು ಸದಾ ಹರಿಧ್ಯಾನದಲ್ಲಿ ಮಗ್ನನಾಗಿರುವನು ಬ್ರಹ್ಮ.

## ಧನುಷ್ಕೋಟಿ

ಧನುಷ್ಕೋಟಿಯಲ್ಲಿ ಶ್ರೀ ರಾಮ ನಿರ್ಮಿಸಿದ ರಾಮಸೇತುವಿನ ದರ್ಶನದಿಂದ ಸಕಲ ಪಾಪಗಳು ಹರಣವಾಗುವುದು.

**''ಕಡಲ ತಡಿಯ ವಾಸ। ಪಡೆಯ ರಾಮನದಾಸ**
**ಮೃಢರುಂಡಾಮಾಲ ಭೂಷ ಬಿಡದೆ ಸೇತುಬಂಧ**
**ವಿಜಯವಿಠಲನ ಅಡಿಗಡಿಗೆ ನೆನೆಸುವ ಶಿವರಾಮಲಿಂಗ ॥**

ಎಂದು ಶ್ರೀ ವಿಜಯದಾಸರು ರಾಮೇಶ್ವರದಲ್ಲಿ ಹಾಡಿರುವರು. ಧನುಷ್ಕೋಟಿ ದರ್ಶನ ಬಹಳ ಶ್ರೇಷ್ಠವಾದದ್ದು. ಕೋಟಿ ನದಿಗಳು ಧನುಷ್ಕೋಟಿಯಲ್ಲಿರಲು ಯಾಕೆ ತಿರುತಿರುಗಿ ಬಳಲುವಿ ಮನುಜ ಅಂದಿದ್ದಾರೆ ರಾಮಭಕ್ತರಾದ ಶ್ರೀ ತ್ಯಾಗರಾಜರು.

ಆದರೆ ಈಗ ಧನುಷ್ಕೋಟಿ 1965ನೇ ಇಸವಿಯಲ್ಲಿ ಸಮುದ್ರದಲ್ಲಿ ಮುಳುಗಿ ಹೋಗಿದೆ. ಇಲ್ಲಿ ಸಮುದ್ರಸ್ನಾನ ಶ್ರೇಷ್ಠವಾದದ್ದು. ಇಲ್ಲಿಗೆ ಸಮೀಪ ನವಪಾಷಾಣ

ದರ್ಭಶಯನ ಕ್ಷೇತ್ರವಿದೆ. ಲೋಕ ಕಲ್ಯಾಣಕ್ಕಾಗಿ ಶ್ರೀ ರಾಮನಿಂದ ಪ್ರತಿಷ್ಠಿತವಾದ ನವಗ್ರಹಗಳು ನವಪಾಷಾಣದಲ್ಲಿದೆ.

ಶ್ರೀ ರಾಮಚಂದ್ರ ದೇವರು ಇಲ್ಲಿ ಸೇತುವೆ ಕಟ್ಟಲು ಪ್ರಾರಂಭಿಸಲು ಸಮುದ್ರವು ಉಕ್ಕಿ ಬರುತ್ತಿರಲು, ಶ್ರೀ ರಾಮನು ಅಲ್ಲೇ ಎರಡು ದಿನ ದರ್ಭಾಸನದ ಮೇಲೆ ಮಲಗಿರಲು ಸಮುದ್ರರಾಜನು ದಾರಿ ಕೊಡಲಿಲ್ಲವೆಂದು ರಾಮನು ಬಾಣ ಬಿಡಲು ಸಿದ್ಧನಾದನಂತೆ. ತಕ್ಷಣ ಸಮುದ್ರ ರಾಜನು ರಾಮನಿಗೆ ಶರಣಾಗತನಾಗಿ ದಾರಿ ಕೊಟ್ಟ ಎಂದು ಹೇಳುವರು. ನಂತರ ಕಪಿ ಸೈನ್ಯದೊಡನೆ ಸೇತುವೆ ಕಟ್ಟಿ ರಾವಣನ ಸಂಹರಿಸಿ ಸೀತಾಮಾತೆಯೊಡನೆ ಅಯೋಧ್ಯಗೆ ಹೋಗಿ ಪಟ್ಟಾಭಿಷಿಕ್ತನಾದನು. ಪಟ್ಟಾಭಿರಾಮನು. ಇಲ್ಲಿ ಸೇತುಮಾಧವನ ಸನ್ನಿಧಾನವಿರುವುದು ಸಮುದ್ರಸ್ನಾನ ಶ್ರೇಷ್ಠ. ರಾಮೇಶ್ವರ ಬಳಿ ಇರುವ ರಾಮಪಾದ ದರುಶನ ಮಾಡುವುದು ಬಹಳ ಶ್ರೇಷ್ಠವಾದದ್ದು. ಶ್ರೀರಾಮನ ಪಾದಧೂಳಿ ಸೋಕಿ ಕಲ್ಲಾಗಿ ಬಿದ್ದ ಅಹಲ್ಯೆಯು ಪಾವನಳಾಗಿ ಪ್ರಾತಃ ಸ್ಮರಣೀಯಳಾದಳು.

**''ಶ್ರೀ ರಾಮ ರಾಮೇತಿ ರಮೇರಾಮ ಮನೋರಮೆ।**
**ಸಹಸ್ರನಾಮತತುಲ್ಯಂ ರಾಮನಾಮ ವರಾನನೇ।**

ಎಂದು ಪಾರ್ವತಿ ಪರಮೇಶ್ವರರು ಸದಾ ರಾಮನಾಮ ಜಪ ಮಾಡುವರು. ಭಕ್ತಿಯಿಂದ ಎಲ್ಲರೂ ರಾಮನಾಮ ಧ್ಯಾನವನ್ನು ಅವಶ್ಯ ಮಾಡತಕ್ಕದ್ದು.

## ಅನಂತಶಯನ

ತಮಿಳುನಾಡಿನ ತಿರುವನಂತಪುರದಲ್ಲಿ ಶ್ರೀ ವಿಷ್ಣುವಿನ ಮೂಲರೂಪವಾದ ಶ್ರೀ ಅನಂತಪದ್ಮನಾಭನನ್ನು ಮೂರು ಬಾಗಿಲಿನಲ್ಲಿ ದರ್ಶನ ಮಾಡಬೇಕು. ಬಹಳ ದೊಡ್ಡ ವಿಗ್ರಹ. ಅತ್ಯಂತ ಸುಂದರವಾದ ಅನಂತಪದ್ಮನಾಭನನ್ನು ನೋಡಲು ಆದಿಯಲ್ಲಿ ಮುಖಾರವಿಂದ, ಮಧ್ಯದಲ್ಲಿ ವಿಶಾಲವಾದ ದೇಹ, ಅಂತ್ಯದಲ್ಲಿ ಪಾದಪದ್ಮ ಹೀಗೆ ನೋಡಬೇಕು. ಶೇಷಶಾಯಿಯಾಗಿ ಮಲಗಿರುವನು. ಆತನಿಗೆ ನಿದ್ರೆ ಎಲ್ಲಿದೆ. ಬ್ರಹ್ಮಾಂಡವನ್ನೇ ಹೊಟ್ಟೆಯಲ್ಲಿ ಧರಿಸಿರುವ ನಿತ್ಯ ತೃಪ್ತನು. ಶ್ರೀದೇವಿ ಭೂದೇವಿಯರು ಪಾದಒತ್ತುತ್ತಿರುವರು; ಬ್ರಹ್ಮದೇವರು ನಾಭಿ ಕಮಲದ ಮೇಲೆ ಕೂತಿರುವರು, ಗರುಡ ಮುಖ್ಯ ಪ್ರಾಣರು ಕೈಮುಗಿದು ನಿಂತಿರುವರು; ಸರಸ್ವತಿ ಭಾರತಿಯರು ಚಾಮರ

ಬೀಸುತ್ತಿರುವರು, ತುಂಬುರು ನಾರದರು ಗಾನ ಮಾಡುತ್ತಿರುವರು, ಅಂತಹ ಮಹಾನ್ ಸ್ವಾಮಿಯ ದರ್ಶನ ಪಡೆದು ಭಕ್ತರು ಧನ್ಯರಾಗತಕ್ಕದ್ದು.

**ಈ ಪರಿಯ ಸೊಬಗಾವ ದೇವರಲಿ ಕಾಣೆ**
**ಗೋಪೀ ಜನಪ್ರಿಯ ಗೋಪಾಲಗಲ್ಲದೇ**

**ಗಗನದಲ್ಲಿ ಸಂಚರಿಪ ಗರುಡವಾಹನ ತುರಗ**
**ಜಗತೀಧರ ಶೇಷ ಪರಿಯಂಕ ಶಯನ**
**ನಿಗಮ ಗೋಚರ ನಮ್ಮ ಪುರಂದರ ವಿಠಲಗಲ್ಲದೆ**
**ಮಿಗಿಲಾದ ದೈವಗಳಿಗೀ ಭಾಗ್ಯವುಂಟೇ?**

ಎಂದು ಪುರಂದರದಾಸರು ಹಾಡಿ ಹೊಗಳಿದ್ದಾರೆ. ಈ ಊರಿಗೆ ಅನಂತಶಯನ ಅನ್ನುತ್ತಾರೆ. ತ್ರಿಧಾಮವನ್ನು ಅನಂತಶಯನವೇ ಅನಂತಾಸನವೆಂದು ತಿರುಪತಿಯೇ ಭೂವೈಕುಂಠವೆಂದು. ಅಯೋಧ್ಯೆಯೇ ಶ್ರೀ ವೈಕುಂಠವೆಂದು ಧ್ಯಾನಿಸಬೇಕು ॥ ದ್ವಾರಕಾ ಕ್ಷೇತ್ರವೇ ಕ್ಷೀರಸಮುದ್ರವೆಂದು ಧ್ಯಾನಿಸಬೇಕು.

## ಕನ್ಯಾಕುಮಾರಿ

ದಕ್ಷಿಣ ಪ್ರದೇಶದ ರಾಮೇಶ್ವರ ಬಳಿ ಮೂರು ಸಾಗರತ್ರಯಗಳು ಕಲೆಯುವ ಸಂಗಮವೇ ಕನ್ಯಾಕುಮಾರಿ ಕ್ಷೇತ್ರ. ಸಮುದ್ರರಾಜನ ಕನ್ಯೆಯಾದ ಈ ಕನ್ಯಾಕುಮಾರಿ ಬೇಡಿದ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡಲು ಕನ್ಯೆಯಾಗಿ ನಿಂತಿರುವಳಿಲ್ಲಿ. ಮಹಾಸೌಂದರ್ಯದಿಂದ ದೇದೀಪ್ಯಳಾಗಿರುವಳು. ಈ ದೇವಸ್ಥಾನ ಬಹಳ ದೊಡ್ಡದಾಗಿದೆ. ಈ ಸಾಗರ ತ್ರಯಗಳು ಕಲೆಯುವ ಸ್ಥಳದಲ್ಲಿ ಸ್ನಾನಾದಿಗಳು ಮಾಡತಕ್ಕದ್ದು.

ಕ್ಷೀರಾಬ್ಧಿ ಕನ್ನಿಕೆ ಶ್ರೀ ಮಹಾಲಕ್ಷ್ಮಿಯರಿಗೆ ವಧುವಾದೆ :

**1. ಶರದಿ ಬಂಧನ ರಾಮಚಂದ್ರ ಮೂರುತಿಗೊ।**
**ಪರಮಾತ್ಮ ಶ್ರೀ ಅನಂತ ಪದ್ಮನಾಭನಿಗೋ।**
**ಸರಸಿಜನಾಭ ಜನಾರ್ಧನ ಮೂರುತಿಗೋ।**
**ಎರಡು ಹೊಳೆಯ ರಂಗಪಟ್ಟಣ ವಾಸಗೋ॥**

2. ಚೆಲುವ ಬೇಲೂರು ಚೆನ್ನಿಗರಾಯನಿಗೋ।
ಗೆಳತಿ ಹೇಳು ಉಡುಪಿಯ ಕೃಷ್ಣರಾಯನಿಗೋ।
ಇಳಿಯೊಳು ಪಂಡರಾಪುರ ನಿಲಯ ವಿಠಲೇಶನಿಗೋ।
ನಳಿನಾಕ್ಷಿ ಪೇಳು ಬದರಿ ನಾರಾಯಣನಿಗೋ।

3. ಮಲಯ ಜಗದಿ ಬಿಂಧು ಮಾಧವರಾಯಗೋ।
ಸುಭದ್ರೆ ವರ ಪುರುಷೋತ್ತಮನಿಗೋ।
ಫಲದಾಯಕ ನಿತ್ಯ ಮಂಗಳ ನಾಯಕಗೊ।
ಚೆಲುವೆ ನಾಚದೆ ಪೇಳು ಶ್ರೀ ವೆಂಕಟೇಶನಿಗೋ॥

4. ವಾಸವಾರ್ಚಿತ ಕಂಚಿ ವರದರಾಜ ಮೂರುತಿಗೋ।
ಅಸುರಾರಿ ಶ್ರೀಮುಷ್ಣದಾದಿ ವರಹನಿಗೋ।
ಶೇಷಶಾಯಿಯಾದ ಶ್ರೀ ರಂಗನಾಯಕಗೋ।
ಸಾಸಿರನಾಮದೊಡೆಯ ಅಳಗಿರೀಶನಿಗೋ॥

5. ಶರಣಾಗತರ ಪೊರೆವ ಶಾರ್ಙ್ಗಪಾಣಿಗೋ।
ವರಗಳೀವ ಶ್ರೀನಿವಾಸಮೂರುತಿಗೋ।
ಕುರುಕುಲಾಂತಕ ರಾಜಗೋಪಾಲ ಮೂರುತಿಗೋ।
ಸ್ತಿರವಾದ ಪುರಂದರವಿಠಲ ರಾಯನಿಗೋ॥
ಆರಿಗೆ ವಧುವಾದೆ ಅಂಭುಜಾಕ್ಷಿ॥

ಎಂದು ಕನ್ಯಾಕುಮಾರಿಯಲ್ಲಿ ಶ್ರೀ ಪುರಂದರದಾಸರು ಹಾಡಿರುವರು. ಇಲ್ಲಿ ಸುತ್ತಮುತ್ತ ಇರುವ ನಾಗರಕೋಯಿಲ್, ತೋತಾದ್ರಿ ಕ್ಷೇತ್ರಗಳು ನೋಡಿಕೊಂಡು ಮುಂದೆ ರಾಮನಾಥಪುರಕ್ಕೆ ಹೋಗಿ ಅಲ್ಲಿಂದ ಮಧುರೆಗೆ ಬರತಕ್ಕದ್ದು. ಇಲ್ಲಿ ಮಧುರೆ ಮೀನಾಕ್ಷಿಯ ದರ್ಶನ ಮಾಡಬೇಕು. ಮೀನಾಕ್ಷಿ ದೇವಸ್ಥಾನ ಬಹಳ ದೊಡ್ಡದಾಗಿದೆ. ಪಾರ್ವತಿಯಾದ ಈ ಮೀನಾಕ್ಷಿ ಕೈಯಲ್ಲಿ ಗಿಳಿಯನ್ನು ಹಿಡಿದು ಕೊಂಡು ನಿಂತಿರುವಳು. ಮಧುರೇ ಮೀನಾಕ್ಷಿ, ಕಂಚಿ ಕಾಮಾಕ್ಷಿ ಕಾಶಿ ವಿಶಾಲಾಕ್ಷಿ ಈ ಮೂರು ದೇವಾಲಯಗಳಲ್ಲಿ ಪಾರ್ವತಿ ಪರಮೇಶ್ವರರು ಸ್ವಯಂ ಬಂದು ನಿಂತಿರುವರು.

ಮಾಂಗಲ್ಯಾಭಿಮಾನಿಯಾದ ಪಾರ್ವತಿ ದೇವಿ ಪೂಜೆ ಮದುವೆ ಆಗುವ ಹುಡುಗಿಯರು ಪೂಜಿಸಿ ಒಳ್ಳೆ ಪತಿಯನ್ನು ಪಡೆಯಬೇಕೆಂಬ ಪದ್ಧತಿಯನ್ನು ಲೋಕಕ್ಕೆ ತೋರಿಸಲು ರುಕ್ಮಿಣೀ ದೇವಿ ಮದುವೆಗೆ ಮುಂಚೆ ಗಿರಿಜಾ ಪೂಜೆಯನ್ನು ಮಾಡಿ ತೋರಿಸಿದಳು. ವರ್ಷದಲ್ಲಿ ಹನ್ನೆರಡು ತಿಂಗಳೂ ಪಾರ್ವತಿ ಪೂಜೆ ಇರುವುದು. ಹಬ್ಬ ಹಾಡು ಪೂಜೆ ದಾರ ಬಾಗಿನ ಎಲ್ಲಾ ಮಾಡುವ ರೂಢಿ ಉಂಟು.

## ಶ್ರೀರಂಗ ಕ್ಷೇತ್ರ

ನಂತರ ಶ್ರೀರಂಗಕ್ಷೇತ್ರಕ್ಕೆ ಬಂದು ಅಲ್ಲಿ ಪವಿತ್ರವಾದ ಕಾವೇರಿ ನದಿಯು ಕವಲು ಒಡೆದು ಶ್ರೀರಂಗನಾಥನ ಮಂದಿರಕ್ಕೆ ಸುತ್ತು ಕಟ್ಟಿರುವಳು. ಈ ಮಂದಿರವು ಏಳು ಪ್ರಾಕಾರಗಳಿಂದ ಬಹಳ ದೊಡ್ಡದಾಗಿರುವುದು. ಶ್ರೀರಂಗನಾಥನ ವಿಗ್ರಹವು ಅತೀ ಸುಂದರವಾಗಿ ಇದೆ. ಈ ಶ್ರೀರಂಗನ ವಿಗ್ರಹವು ಇಕ್ಷ್ವಾಕುವಂಶದ ರಾಜರಿಗೆ ಬ್ರಹ್ಮ ದೇವರು ಕೊಟ್ಟಿರುವನು. ಈ ವಿಗ್ರಹವು ಅಯೋಧ್ಯದಲ್ಲಿ ದಶರಥರಾಜನ ಮನೆಯಲ್ಲಿತ್ತು. ಶ್ರೀ ರಾಮನು ರಾವಣನ ಸಂಹಾರ ಮಾಡಿ ವಿಭೀಷಣಗೆ ಲಂಕಾ ರಾಜ್ಯವನ್ನು ಪಟ್ಟ ಕಟ್ಟಿ ಸೀತಾಮಾತೆ ಸಹಿತ ಸಕಲ ಪರಿವಾರದೊಡನೆ ಅಯೋಧ್ಯೆಗೆ ಬಂದು ಪಟ್ಟಾಭಿಷಕ್ತನಾದನು. ಆಗ ವಿಭೀಷಣನು ಅಯೋಧ್ಯೆಕ್ಕೆ ಬಂದು ಸೀತಾ ರಾಮರ ಪಟ್ಟಾಭಿಷೇಕವನ್ನು ಸಂದರ್ಶಿಸಿ, ಅಲ್ಲಿರುವ ಶ್ರೀರಂಗನ ವಿಗ್ರಹವು ತನಗೆ ಬೇಕೆಂದು ಕೋರಲು ಶ್ರೀರಾಮನು ಶ್ರೀರಂಗನ ವಿಗ್ರಹವನ್ನು ವಿಭೀಷಣನಿಗೆ ಕೊಟ್ಟನು. ಆ ವಿಗ್ರಹವು ವಿಭೀಷಣ ತರುವಾಗ ದಾರಿಯಲ್ಲಿ ಕಾವೇರಿ ನದೀ ತೀರದಲ್ಲಿಟ್ಟು ಸ್ನಾನಾದಿಗಳು ಮಾಡಿಕೊಂಡು ಬಂದು ವಿಗ್ರಹವನ್ನು ತೆಗೆಯಲು ಅದು ಅಲ್ಲಿಂದ ಕದಲಲೇ ಇಲ್ಲ. ಕೊನೆಗೆ ಆ ವಿಗ್ರಹವನ್ನು ಅಲ್ಲಿಯೇ ಬಿಟ್ಟು ಲಂಕೆಗೆ ಹೋರಟನಂತೆ. ಪ್ರತಿ ದಿವಸ ವಿಭೀಷಣ ಬ್ರಾಹ್ಮೀ ಮುಹೂರ್ತದಲ್ಲಿ ಬಂದು ಶ್ರೀರಂಗನಾಥನ ದರ್ಶನ ಪಡೆದು ಹೋಗುತ್ತಿದ್ದನೆಂದು ಪುರಾಣವಾಕ್ಯ.

**ಶ್ರೀರಂಗನಾಥ: ಸುರಸಿದ್ಧ ಗೀತ:**
**ಕಾರುಣ್ಯ ಸಿಂಧು : ಕವಿವರ್ಗಬಂಧು :**
**ಸ್ಮೀರಾಶ್ಯಚಂದ್ರ : ಸ್ಮರತಾಂಮಹೇಂದ್ರ :**
**ಕ್ಶ್ನಿರುಟ್ ಪ್ರಸನ್ನ: ಕ್ಷಪಯತ್ಯಷಂನ :**

ಎಂದು ಸ್ತೋತ್ರ ಮಾಡಿ ಶ್ರೀರಂಗನಾಥನನ್ನು ಧ್ಯಾನಿಸತಕ್ಕದ್ದು.

ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ
ಕಸ್ತೂರಿ ರಂಗನ ಪಾಡದ।
ಹಾರ ಹೀರ ವೈಜಯಂತಿ ತೋರಮುತ್ತಿನ ಪಾದುಕೆ ಧರಿಸಿ
ತೇರನೇರಿ ಮೆರೆದು ಬರುವ ರಂಗವಿಠಲನ ನೋಡದ॥

ಎಂದು ಹಾಡಿರುವರು ಶ್ರೀ ಶ್ರೀ ಪಾದರಾಜರು. ಇಲ್ಲಿ ವೈಕುಂಠ ಏಕಾದಶಿದಿನ ಶ್ರೀರಂಗನಾಥನಿಗೆ ಅತ್ಯಂತ ವೈಭವದಿಂದ ಉತ್ಸವ ನಡೆಯುವುದು. ಪವಿತ್ರವಾದ ವಿರಜ ಎಂದೆನಿಸುವ ಕಾವೇರಿ ನದಿಯಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಾದಿಗಳನ್ನಾಚರಿಸಿ

ನಮಃ ಕರಾಳವದನೆ ನಮಸ್ತೆ ಕಲಿನಾಶಿನಿ ನಮಸ್ತೆ
ಕಾವೇರಿ ದೇವಿ ಗೃಹಾಣಾರ್ಘ್ಯಂ ನಮುಸ್ತುತೇ॥

ಎಂದು ಹೇಳಿ ಅರ್ಘ್ಯವನ್ನು ಬಿಡತಕ್ಕದ್ದು. ನಂತರ ಶ್ರೀರಂಗನಾಥನ ದರ್ಶನ, ಅರ್ಚನೆ ಆರತಿ ನೋಡಿಕೊಂಡು ಪ್ರಸಾದ ಸ್ವೀಕರಿಸತಕ್ಕದ್ದು. ಸ್ತ್ರೀಯರು ಮರದ ಬಾಗಿನವನ್ನು ಕೊಡತಕ್ಕದ್ದು. ಕೋಡಗಿನ ತಲಕಾವೇರಿ ಎಂಬಲ್ಲಿ ಕಾವೇರಿ ನದಿಯ ಉಗಮಸ್ಥಾನವಿದೆ. ತುಲಾಮಾಸದಲ್ಲಿ ಕೋಡಗಿನ ನದಿಯಲ್ಲಿ ಗಂಗೆಯು ಪೂರ್ಣ ಸನ್ನಿಧಾನವಿರುವುದರಿಂದ ಅಂದು ಸ್ನಾನಾದಿಗಳು ಬಹಳ ಶ್ರೇಷ್ಠವಾದದ್ದು. ಕಾರ್ತೀಕ ಮಾಸದ ಹುಣ್ಣಿಮೆ, ಮಾಘಮಾಸದ ಹುಣ್ಣಿಮೆ, ಮತ್ತು ವೈಶಾಖದ ಹುಣ್ಣಿಮೆ ಮುತ್ತೈದೆಯರಿಗೆ ಶಕ್ತ್ಯಾನುಸಾರ ತುಂಬಿದ ಮರದ ಬಾಗಿನವನ್ನು ಕೊಡಬೇಕು. ಬೆಳ್ಳಿ, ಅರಶಿನ ಕುಂಕುಮ ವಾಲೆಗಳು, ಮಂಗಳ ಸೂತ್ರ, ಕಾಲುಂಗರ, ಸೀರೆ ಕುಪ್ಪಸ, ಕಾಡಿಗೆ, ಬಳೆ ಮರದ ಬಾಗಿನದ ಸಾಮಾನು, ಧಾನ್ಯ ಎಲ್ಲಾ ತುಂಬಿ ಕೊಡತಕ್ಕದ್ದು. ಗಂಗಾ ಜಯಂತಿ ದಿನ ಕೂಡಾ ಮರದ ಬಾಗಿನ ಕೊಡಬೇಕು.

## ಕುಂಭಕೋಣ

ದಕ್ಷಿಣ ಭಾರತದ ಪ್ರಸಿದ್ಧ ಯಾತ್ರಾಸ್ಥಳಗಳಲ್ಲಿ ಒಂದಾದ ಕುಂಭ ಕೋಣ ಕ್ಷೇತ್ರವು ಬಹುದೇವಾಲಯಗಳಿಂದ ಕೂಡಿದೆ. ಅದರಲ್ಲಿ ಸಾರಂಗಪಾಣಿ ಚಕ್ರಪಾಣಿ, ಕುಂಭೇಶ್ವರ, ವಾಗೀಶ್ವರ, ರಾಮಸ್ವಾಮಿ ಎಂದು ಐದು ಪ್ರಸಿದ್ಧ ದೇವಾಲಯಗಳುಂಟು. ಪವಿತ್ರವಾದ ಕಾವೇರಿ ನದಿಯ ತೀರದಲ್ಲಿ ಇರುವ ಈ ಕ್ಷೇತ್ರದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಪರಮಗುರುಗಳಾದ ಶ್ರೀ ವಿಜಯೀಂದ್ರ ತೀರ್ಥರ ಮೂಲ ಬೃಂದಾವನವು ಇಲ್ಲಿ ಇದೆ.

ಕುಂಬಕೋಣಕ್ಕೆ ಅತಿ ಸಮೀಪದಲ್ಲಿ ತಿರುಚನಾಪಲ್ಲಿ ಎಂಬ ದೊಡ್ಡ ಪಟ್ಟಣವಿದೆ. ಇಲ್ಲಿ ಕೂಡಾ ಕಾವೇರಿ ನದಿ ಉಂಟು.

## ಕಂಚಿ

ನಂತರ ಸಪ್ತಮಹಾ ಕ್ಷೇತ್ರಗಳಲ್ಲಿ ಒಂದಾದ ಕಂಚಿ ಪಟ್ಟಣವು (ಮದ್ರಾಸ್) ಚೆನ್ನೈ ನಗರಕ್ಕೆ ಸಮೀಪದಲ್ಲಿರುವುದು. ಇಲ್ಲಿ ವಿಷ್ಣು ಕಂಚಿ, ಶಿವಕಂಚಿ ಎಂದು ಎರಡು ದೇವಸ್ಥಾನಗಳಿರುವುದು. ವಿಷ್ಣು ಕಂಚಿಯಲ್ಲಿ ವರದರಾಜಸ್ವಾಮಿ ವಿಗ್ರಹವು ಅತಿ ಸುಂದರವಾಗಿ ಇದೆ. ಈತನನ್ನು ಕೃತಯುಗದ ವರದರಾಜ ಎನ್ನುತ್ತಾರೆ. ಭಕ್ತರಿಗೆ ಬೇಡಿದ ವರಗಳನ್ನು ಕೊಡುತ್ತಿರುವನು. ಶಿವಕಂಚಿಯಲ್ಲಿ ಪಂಚ ತತ್ತ್ವ ಲಿಂಗಗಳಲ್ಲಿ ಒಂದಾದ ಏಕಾಂಬರೇಶ್ವರನ ದೇವಸ್ಥಾನವಿದೆ. ಕಂಚಿ ಕಾಮಾಕ್ಷಿ (ಪಾರ್ವತಿ ದೇವಿ) ಮಂದಿರವಿದೆ. ಅಲ್ಲಿ ಸಮೀಪದಲ್ಲಿರುವ ತಿರುವಣ್ಣಾಮಲೈ ಎಂಬ ಊರಿನಲ್ಲಿ ಪಂಚ ತತ್ತ್ವಲಿಂಗಗಳಲ್ಲಿ ಸೇರಿದ ತೇಜಲಿಂಗವಾದ ಅರುಣಾಚಲೇಶ್ವರನ ದೇವಸ್ಥಾನವಿದೆ. ಅಲ್ಲಿಗೆ ಹತ್ತಿರದಲ್ಲಿರುವ ಚಿದಂಬರ ಕ್ಷೇತ್ರದಲ್ಲಿ ಪಂಚತತ್ತ್ವ ಲಿಂಗಗಳಲ್ಲಿ ಒಂದಾದ ವಾಯುಲಿಂಗೇಶ್ವರನ ದೇವಸ್ಥಾನವಿದೆ. ತಿರುಪತಿಗೆ ಸಮೀಪದಲ್ಲಿರುವ ಕಾಳಹಸ್ತಿ ಎಂಬ ಊರಿನಲ್ಲಿ ಪಂಚತತ್ತ್ವಲಿಂಗಗಳಲ್ಲಿ ಒಂದಾದ ಅಪ್ಪಲಿಂಗೇಶ್ವರನ ಮಂದಿರವಿದೆ. ಇಲ್ಲಿ ಸುವರ್ಣ ಮುಖಿ ಎಂಬ ಪವಿತ್ರವಾದ ನದಿ ಉಂಟು. ಮನೋನಿಯಾಮಕನಾದ ರುದ್ರ ದೇವರ ಐದು ಪಂಚತತ್ತ್ವಲಿಂಗಗಳು, ಹನ್ನೆರಡು ಜ್ಯೋತಿರ್ ಲಿಂಗಗಳು, ರುದ್ರದೇವರ ಅನುಗ್ರಹದಿಂದ ಮೋಕ್ಷ ಮಾರ್ಗಕ್ಕೆ ಸಾಧನವಾದದ್ದು, ಪ್ರಾತಃ ಕಾಲದಲ್ಲಿ ರುದ್ರಾಂತರ್ಗತ ಶ್ರೀ ಲಕ್ಷ್ಮೀನರಸಿಂಹದೇವರನ್ನು ಧ್ಯಾನಿಸತಕ್ಕದ್ದು.

ಕಂಚಿ ಹತ್ತಿರ ಘಟಿಕಾಚಲವೆಂದು ಪ್ರಸಿದ್ಧವಾದ ಹನುಮಂತ ದೇವರ ಬೆಟ್ಟವಿದೆ. ಅದಕ್ಕೆ ಎದುರು ನರಸಿಂಹ ದೇವರ ಬೆಟ್ಟವಿದೆ. ಹರಿಸರ್ವೋತ್ತಮರು ವಾಯು ಜೀವೋತ್ತಮರಾದ ಇವರಿಬ್ಬರು ಪವಿತ್ರ ಸ್ಥಳದಲ್ಲಿದ್ದು ನಂಬಿದ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವರು. ಇಲ್ಲಿ ತಪ್ಪದೇ ದರ್ಶನ ಮಾಡಿ ಇವರ ಅನುಗ್ರಹಕ್ಕೆ ಪಾತ್ರರಾಗತಕ್ಕದ್ದು.

## ತಿರುಕೋವಿಲೂರು

ಅರುಣಾಚಲಕ್ಕೆ ಸಮೀಪದಲ್ಲಿ ತಿರುಕೋವಿಲೂರು ಎಂಬ ಪವಿತ್ರ ಕ್ಷೇತ್ರವಿದೆ.

ಇಲ್ಲಿ ಶ್ರೀ ಮಹಾವಿಷ್ಣುವು ವಾಮನಾವತಾರ ತಾಳಿದನೆಂದು ಸ್ಥಳ ಮಹಾತ್ಮೆಯಲ್ಲಿದೆ. ಇಲ್ಲಿ ತ್ರಿವಿಕ್ರಮ ದೇವರ ದೇವಸ್ಥಾನವಿದೆ. ಈ ಕ್ಷೇತ್ರವು ದಕ್ಷಿಣ ಪಿನಾಕಿನಿ ತೀರದಲ್ಲಿದೆ. ಈ ನದೀ ತೀರದಲ್ಲಿ ಮಹಾ ತಪಸ್ವಿಗಳಾದ ರಘೋತ್ತಮ ತೀರ್ಥರ ದಿವ್ಯ ಬೃಂದಾವನವಿದೆ. ಇವರು ಬಾಲ ಯತಿಗಳು. ಏಳು ವರ್ಷಕ್ಕೆ ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ಇವರು ಅಷ್ಟದಿಕ್ಪಾಲಕರಲ್ಲಿ ಒಬ್ಬರು ಎಂದು ಹೇಳುವರು. ಇವರಿಗೆ ಶರಣು ಬಂದ ಸಜ್ಜನರನ್ನು ಕರುಣದಿಂದ ಉದ್ಧರಿಸುವರು. ಇವರು ಸ್ವಪ್ನದಲ್ಲಿ ತಮ್ಮ ಗುರುಗಳ ಹತ್ತಿರ ಉನ್ನತ ವಿದ್ಯೆಯನ್ನು ಕಲಿತು ಅನೇಕ ಗ್ರಂಥಗಳನ್ನು ಬರೆದು ಭಾವಬೋಧಕರಾದರೆಂದು ಪ್ರಸಿದ್ಧಿಯಾದರು. ಪ್ರತಿ ವರ್ಷ ಮುಕ್ಕೋಟಿ ದ್ವಾದಶಿ ದಿನ ಶ್ರೀ ರಘೋತ್ತಮ ತೀರ್ಥರ ಆರಾಧನಾ ಮಹೋತ್ಸವವನ್ನು ಶ್ರೀ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ಸತ್ಯಾತ್ಮ ತೀರ್ಥರು ವಿಜೃಂಭಣೆಯಿಂದ ನಡೆಸುವರು. ಅಭಿಷೇಕ ಬಹಳ ಚೆನ್ನಾಗಿ ನಡೆಯುವುದು. ಸಾವಿರಾರು ಭಕ್ತರು ಇಲ್ಲಿಗೆ ಬರುವರು.

ಇಲ್ಲಿಗೆ ಸಮೀಪದಲ್ಲಿ ಶ್ರೀ ಮುಷ್ಣ ಎಂಬ ಮಹಾ ಕ್ಷೇತ್ರವು ಇದೆ. ಭೂ ವರಾಹದೇವರ ದೇವಸ್ಥಾನವಿದೆ. ಇಲ್ಲಿ ಶ್ರೀ ವರಾಹದೇವರ ಅವತಾರವಾಗಿದೆ ಎಂದು ಪುರಾಣ ಪ್ರಸಿದ್ಧಿ ಉಂಟು. ಇಲ್ಲಿ ದಂಡ ತೀರ್ಥವು ಇದೆ.

## ಉಡುಪಿ

ನಂತರ ಶ್ರೀ ಮಧ್ವಾಚಾರ್ಯರಿಂದ ಪ್ರತಿಷ್ಠಿತವಾದ ಮತ್ತು ಅನ್ನಬ್ರಹ್ಮನಾದ ಶ್ರೀ ಕೃಷ್ಣನ ದರ್ಶನ ಪಡೆಯಲು ಪವಿತ್ರವಾದ ಉಡುಪಿ ಕ್ಷೇತ್ರಕ್ಕೆ ಬರಬೇಕು. ಇಲ್ಲಿ ಮಧ್ವಸರೋವರ ಎಂಬ ಪವಿತ್ರವಾದ ತೀರ್ಥವಿದೆ.

**''ಮಧ್ವ ಸರೋವರ ಸ್ನಾನ। ಕೃಷ್ಣನ ದರ್ಶನ**
**ಶುದ್ಧನಾಗಿ ಮಾಡು ವಿಜಯ ವಿಠಲನೊಲಿವ॥**

ಅಂದಿದ್ದಾರೆ ಶ್ರೀ ವಿಜಯದಾಸರು. ಶ್ರೀ ಬಾಲಗೋಪಾಲ ಕೃಷ್ಣನ, ದರ್ಶನ, ಸೇವನ ಅರ್ಚನ ವಂದನ ನರ್ತನ ಕೀರ್ತನ ಸಖ್ಯ ದಾಸ್ಯ ಆತ್ಮಾರ್ಪಣ ಮೊದಲಾದ ನವ ವಿಧ ಭಕ್ತಿಯನ್ನು ಮಾಡಿ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ ಅವನ ಪ್ರಸಾದವನ್ನು ಪಡೆಯತಕ್ಕದ್ದು.

ಶ್ರೀ ಮಧ್ವಾಚಾರ್ಯರು ಹುಟ್ಟಿದ ಪವಿತ್ರ ಸ್ಥಳವಾದ ಪಾಜಕ ಕ್ಷೇತ್ರವನ್ನು ದರ್ಶನ

ಮಾಡಿ ಅಲ್ಲಿರುವ ವಾಸುದೇವ ತೀರ್ಥದಲ್ಲಿ ಮಿಂದು ಶ್ರೀಮಧ್ವಾಚಾರ್ಯರ ಪಾದುಕೆಗಳನ್ನು ಸೇವಿಸಿ, ದುರ್ಗಾ ಬೆಟ್ಟ, ಕಲ್ಲೂರು ಲಕ್ಷ್ಮಿ, ಕಟೀಲು ಲಕ್ಷ್ಮಿ, ಮಹಾಲಕ್ಷ್ಮೀದೇವಿಯರ ದರ್ಶನ ಪಡೆದು ತೀರ್ಥಗಳಲ್ಲಿ ಮಿಂದು ಪ್ರಸಾದ ಸ್ವೀಕರಿಸಬೇಕು. ಅಷ್ಟ ಮಠಾಧೀಶರಿಗೆ ಪಾದ ಪೂಜೆಗಳನ್ನು ಮಾಡಿ ಅವರ ಅನುಗ್ರಹ ಪಡೆಯತಕ್ಕದ್ದು.

ಉಡುಪಿಯಲ್ಲಿ ಮಕರ ಸಂಕ್ರಮಣೋತ್ಸವ ನೋಡುವುದಕ್ಕೆ ಕಣ್ಣಿಗೆ ಹಬ್ಬದಂತಿರುವುದು. ಸುಂದರ ಮನೋಹರನಾದ ಆ ಬಾಲಕೃಷ್ಣನ ದರ್ಶನ, ಬಾಲಯತಿಗಳ ಲಗುಬಗೆಯ ಓಡಾಟ, ರಾಜಾಂಗಳದ ಊಟ, ಚೌಕಿ ಊಟ ಮಹಾ ಪ್ರಸಾದವನ್ನು ಸ್ವೀಕರಿಸಲು ಸಾವಿರಾರು ಜನರು ಇಲ್ಲಿಗೆ ಬರುವರು.

ಅಣು ಮೂರುತಿ। ಪರಮಾಣು ಮೂರುತಿ।
ಮಹಾಘನ ಮೂರುತಿ। ಪ್ರಣವಮೂರುತಿ।
ಮಧ್ವಮುನಿಗೊಲಿದ ಉಡುಪಿ ಕೃಷ್ಣನ
ದರ್ಶನ ಮಾಡಿದವರು ಧನ್ಯರು॥

ಇಲ್ಲಿಗೆ ಸಮೀಪದಲ್ಲಿರುವ ಸುಬ್ರಹ್ಮಣ್ಯ, ಕ್ಷೇತ್ರಕ್ಕೆ ಹೋಗಿ ಕುಮಾರಧಾರೆಯಲ್ಲಿ ಮಿಂದು ದರ್ಶನಾದಿಗಳನ್ನು ಮಾಡಿಕೊಂಡು ಅಲ್ಲೇ ಇರುವ ಧರ್ಮಸ್ಥಳದಲ್ಲಿ ಮಂಜುನಾಥನ ದರ್ಶನ ಮಾಡಿ, ಇನ್ನು ಉಡುಪಿಗೆ ಸುತ್ತಮುತ್ತಲಿರುವ ಕ್ಷೇತ್ರಗಳನ್ನು ನೋಡಿಕೊಂಡು ಬರತಕ್ಕದ್ದು. ಶ್ರೀಮಧ್ವಾಚಾರ್ಯರ ತಮ್ಮಂದಿರು ಮಹಾ ವೈರಾಗ್ಯ ಶಿಖಾಮಣಿಗಳಾದ ಶ್ರೀ ವಿಷ್ಣುತೀರ್ಥರು ತಪಸ್ಸು ಮಾಡಿದ ಬೆಟ್ಟವನ್ನು ದರ್ಶನ ಮಾಡತಕ್ಕದ್ದು.

## ಸ್ವಾದಿ ಕ್ಷೇತ್ರ

ನಂತರ ಪವಿತ್ರವಾದ ಸ್ವಾದಿ ಕ್ಷೇತ್ರಕ್ಕೆ ಬಂದು ಅಲ್ಲಿ ಧವಳ ಗಂಗೆಯಲ್ಲಿ ಮಿಂದು ಮಹನೀಯರು ಮಹಾತಪಸ್ವಿಗಳಾದ ಶ್ರೀ ವಾದಿರಾಜರು ಸಶರೀರದಿಂದ ಬೃಂದಾವನ ಪ್ರವೇಶ ಮಾಡಿದ ದಿವ್ಯ ಬೃಂದಾವನವನ್ನು ದರ್ಶನ ಮಾಡಿ ಅವರ ಅನುಗ್ರಹಕ್ಕೆ ಪಾತ್ರರಾಗತಕ್ಕದ್ದು. ಶ್ರೀ ವಾದಿರಾಜರು ತಮ್ಮ ಶಿಷ್ಯರಾದ ಭೂತರಾಜರಿಂದ ಹಿರೆ ಬದರಿ ಕ್ಷೇತ್ರದಿಂದ ಹೊರಿಸಿಕೊಂಡು ತಂದಿರುವ ಕಲ್ಲಿನ ರಥ ಸ್ವಾಧಿಯಲ್ಲಿ ಇರುವುದು. ಆ ರಥದಲ್ಲಿ ಶ್ರೀ ತಿವಿಕ್ರಮದೇವರು ರಮಾದೇವಿಯೊಡನೆ ವಿರಾಜಮಾನರಾಗಿದ್ದಾರೆ.

ತ್ರಿವಿಕ್ರಮ ದೇವರ ಗುಡಿ ಎದುರಿಗೆ ದೊಡ್ಡದಾದ ಕಲ್ಲಿನ ಧ್ವಜಸ್ತಂಬವಿದೆ. ಫಾಲ್ಗುಣ ಮಾಸದಲ್ಲಿ ಶ್ರೀ ವಾದಿರಾಜರ ಆರಾಧನೆ ನಡೆಯುವಾಗ ಸಾವಿರಾರು ಭಕ್ತಾದಿಗಳು ಇಲ್ಲಿಗೆ ಬಂದು ಇಷ್ಟಾರ್ಥಗಳನ್ನು ಪಡೆದುಕೊಳ್ಳುತ್ತಾರೆ. ಶ್ರೀ ವಾದಿರಾಜರು ಕಾಶಿಯಿಂದ ಸ್ವಾಧಿಗೆ ಗಂಗೆಯನ್ನು ತರಿಸಿರುವರು. ಅದೇ ಈಗಲ್ಲಿರುವ ಧವಳ ಗಂಗಾ ತೀರ್ಥ. ಅಲ್ಲಿ ಭೂತರಾಜನ ಮಂದಿರವಿದೆ. ಭೂತರಾಜನೆದುರು ಭಕ್ತರು ಕಾಯಿ ಉರುಳಿಸಿ ಅಭೀಷ್ಟಗಳನ್ನು ನೆರವೇರಿಸಿಕೊಳ್ಳುವರು. ಶ್ರೀ ವಾದಿರಾಜರು ಅನೇಕ ಉತ್ಕೃಷ್ಟ ಗ್ರಂಥಗಳನ್ನು ಬರೆದಿರುವರು. ಯುಕ್ತಿಮಲ್ಲಿಕಾ, ಸರಸಭಾರತೀ ವಿಲಾಸ, ತೀರ್ಥಪ್ರಬಂಧ, ರುಕ್ಮಿಣೇಶ ವಿಜಯ ಇನ್ನು ಸ್ವಪ್ನಪದ, ಲಕ್ಷ್ಮೀ ಸೋಭಾನ ಹಾಡು ಮೊದಲಾದ ಅನೇಕ ಗ್ರಂಥಗಳು ರಚಿಸಿರುವರು. ಇವರು ಕನ್ನಡದಲ್ಲಿ ಅನೇಕ ಪದಗಳು, ಸುಳಾದಿ, ಉಗಾಭೋಗ ರಚಿಸಿರುವರು. ಇವು ಸ್ತ್ರೀಯರಿಗೆ ಮತ್ತು ಸಂಸ್ಕೃತ ತಿಳಿಯದವರಿಗೆ ಬಹಳ ಅನುಕೂಲವಾಗಿವೆ. ಹಯವದನ ದೇವರನ್ನು ಪ್ರತ್ಯಕ್ಷೀಕರಿಸಿಕೊಂಡ ಮಹನೀಯರು ಇವರು. ಇವರ ಪದಗಳಲ್ಲಿ ಹಯವದನ ಎಂದು ಮುದ್ರಿಕೆ ಇದೆ. ಈ ಪದಗಳಲ್ಲಿ ವೇದ ಪುರಾಣ ಶಾಸ್ತ್ರಾರ್ಥಗಳೆಲ್ಲ ತುಂಬಿವೆ. ಇಲ್ಲಿಗೆ ಸಮೀಪದಲ್ಲಿ ಇರುವ ತಪಸ್ಸು ಮಾಡಿದ ಪವಿತ್ರವಾದ ಸ್ಥಳವಿದೆ. ಇದಕ್ಕೆ ತಪೋವನವೆಂದು ಕರೆಯುತ್ತಾರೆ. ಇವರನ್ನು ವಿಷ್ಣುದೂತರು ಕರೆದೊಯ್ಯಲು ಬಂದಾಗ ಅವರನ್ನು ಎರಡು ದಿನ ಕಾಯಿಸಿ ತಮ್ಮ ಕೆಲಸ ಪೂರೈಸಿಕೊಂಡು ಹೊರಟ ಧೀಮಂತರು; ನೋಡಿ ಸುತ್ತಮುತ್ತ ನೋಡಿಕೊಂಡು ಅಲ್ಲಿಂದ ಗೋಕರ್ಣ ಕ್ಷೇತ್ರಕ್ಕೆ ಬರತಕ್ಕದ್ದು.

## ಗೋಕರ್ಣ

ಸಮುದ್ರ ತೀರದಲ್ಲಿರುವ ಗೋಕರ್ಣ ಕ್ಷೇತ್ರವು ಪವಿತ್ರವಾದದ್ದು. ಇಲ್ಲಿ ಮನೋನಿಯಾಮಕರಾದ ಗೋಕರ್ಣೇಶ್ವರನ ಮಂದಿರವಿದೆ. ಮತ್ತು ನಿಂತು ಕೊಂಡಿರುವ ಗಣಪತಿ ದೇವಸ್ಥಾನವಿದೆ.

ಒಂದಕ್ಕೆ ರಾವಣನು ರುದ್ರದೇವರನ್ನು ಕುರಿತು ತಪವನ್ನಾಚರಿಸಿ ರುದ್ರದೇವರ ಆತ್ಮಲಿಂಗವನ್ನು ಕೇಳಲು ರುದ್ರದೇವರು ತಮ್ಮ ಆತ್ಮಲಿಂಗವನ್ನು ಕೊಟ್ಟು ಇದನ್ನು ಎಲ್ಲಿಯೂ ಕೆಳಗಿಡದೇ ತೆಗೆದುಕೊಂಡು ಹೋಗು ಎಂದು ಹೇಳಿದರಂತೆ. ರಾವಣನು ಆತ್ಮಲಿಂಗವನ್ನು ತೆಗೆದುಕೊಂಡು ಲಂಕೆಗೆ ಹೊರಡುವಾಗ ಮಾರ್ಗ ಮಧ್ಯದಲ್ಲಿ ಸಂಧ್ಯಾಸಮಯವಾಗಲು ಸಂಧ್ಯಾ ಜಪವನ್ನು ಪೂರೈಸಬೇಕಾಯಿತು. ಎದುರಿಗೆ ಗಣೇಶ ಬ್ರಹ್ಮಚಾರಿ ಹುಡುಗನಾಗಿ ನಿಂತಿರಲು ಆ ಹುಡುಗನ ಕೈಲಿ ಆತ್ಮಲಿಂಗವನ್ನು ಕೊಟ್ಟು

ರಾವಣನು ಬೇಗ ಸಂಧ್ಯಾವಂದನೆ ಪೂರೈಸಿ ಬರುವೆನೆಂದು ಹೇಳಿ ಹೋದ. ಆಗ ಆ ಬಾಲಕನು ತಾನು ಮೂರು ಸಾರಿ ಕರೆಯುವುದರಲ್ಲಿ ಬರುವಂತೆ ಸೂಚಿಸಿದ. ರಾವಣನು ಅರ್ಘ್ಯವನ್ನು ಕೊಡುವ ಸಮಯ ನೋಡಿ ಆ ಬಾಲಕನು ರಾವಣ, ರಾವಣ, ರಾವಣ ಎಂದು ಮೂರು ಸಾರಿ ಕೂಗಿ ರಾವಣ ಬರದಿರಲಾಗಿ ಆತ್ಮಲಿಂಗವನ್ನು ಕೆಳಗಿಟ್ಟನು. ತಕ್ಷಣ ರಾವಣನು ಬಂದು ಲಂಕಾಪಟ್ಟಣಕ್ಕೆ ತೆಗೆದುಕೊಂಡು ಹೋಗಬೇಕೆಂದಿದ್ದ ಆತ್ಮಲಿಂಗವು ಕಲ್ಲಾಗಿ ಕುಳಿತಿರುವುದನ್ನು ಕಂಡು, ಅದನ್ನು ಕೀಳಲು ಎಷ್ಟೋ ಪ್ರಯತ್ನಿಸಿದರೂ ಸಾಧ್ಯವಾಗದೆ ಸಿಟ್ಟಿನಿಂದ ಆ ಬಾಲಕನ ತಲೆಯ ಮೇಲೆ ಬಲವಾಗಿ ಗುದ್ದಿದನೆಂದು ಆ ಕಾರಣವಾಗಿ ಗೋಕರ್ಣ ಗಣಪನ ಆಕಾರ ಕುಬ್ಜವೆಂದು ಪ್ರತೀತಿ. ಆ ಆತ್ಮಲಿಂಗ ವಿರುವ ಸ್ಥಳದಲ್ಲಿಯೇ ಮಂದಿರವು ನಿರ್ಮಾಣವಾಯಿತು. ಗೋವಿನ ಕಿವಿಯ ಆಕಾರದಲ್ಲಿರುವುದರಿಂದ ರುದ್ರದೇವರಿಗೆ ಗೋಕರ್ಣೇಶ್ವರ ಎಂದು ಹೆಸರು. ಆ ಊರಿಗೆ ಗೋಕರ್ಣ ಎಂದೇ ಹೆಸರಾಯಿತು. ಗಣಪತಿ ದೇವಸ್ಥಾನದಲ್ಲಿರುವ ಗಣೇಶನಿಗೆ ರಾವಣನು ಹೊಡೆದಿರುವುದರಿಂದ ತಲೆ ಮೇಲೆ ಬುಗಟೆ ಇದ್ದಹಾಗೆ ಕಾಣಿಸುವುದು. ನರಚಿತ್ತ ಒಂದಾದರೆ, ಹರಿಚಿತ್ತ ಬೇರೆಯೇ ಆಗುವುದೆಂಬುದಕ್ಕೆ ಇದು ನಿದರ್ಶನ.

ನಂತರ ತುಂಗಭದ್ರ ನದಿಯ ಮೇಲೆ ಬಳ್ಳಾರಿಗೆ ಬರಬಹುದು. ಬಳ್ಳಾರಿ ಜಿಲ್ಲೆ ಸುತ್ತಮುತ್ತ ಪ್ರಾಣ ದೇವರ ದೇವಸ್ಥಾನಗಳು ಬಹಳ ಇವೆ. ಕೋಟೆ ಪ್ರಾಣದೇವರು ಹೊನ್ನಾಳಿ ಪ್ರಾಣದೇವರು, ಬೊಮ್ಮಗಟ್ಟಿ ಪ್ರಾಣದೇವರು, ಮದಲಗಟ್ಟಿ ಪ್ರಾಣದೇವರು, ಬೆಳ್ಳಿ ಗುಂಡಹನುಮಪ್ಪ, ವಡಕರಾಯ, ಮಂಗೇಶ, ಕಸಾಪುರ ಹನುಮಪ್ಪ ಮೊದಲಾದ ಅನೇಕ ದೇವಸ್ಥಾನಗಳಿವೆ. ತುಂಗಭದ್ರ ತೀರದಲ್ಲಿ ಹುಲಿಗೆಮ್ಮ ಎಂದು ಪ್ರಸಿದ್ಧವಾದ ದೇವಸ್ಥಾನವಿದೆ. ಈಕೆಯ ಕಣ್ಣಿನಲ್ಲಿ ಎರಡು ಸಾಲಿಗ್ರಾಮವಿದೆ. ಹಿಂದಕ್ಕೆ ಈ ಲಕ್ಷ್ಮೀದೇವಿಯನ್ನು ಶ್ರೀವ್ಯಾಸರಾಜರು ಪೂಜಿಸಿದರಂತೆ, ಅನೇಕ ಭಕ್ತರು ಈಕೆಯನ್ನು ಪೂಜಿಸುವರು.

**ಜಯ ಕೊಲ್ಲಾಪುರಿ ನಿಲಯೆ ಭಜದಿಷ್ಟೇತರವಲಯೇ**
**ತವಪಾದ ಹೃದಿಕಲಯೇ ರತ್ನರಚಿತವಲಯೇ ||**

ಎಂದು ಪಂಡಿತರಾದ ಶ್ರೀ ಹುಲಗಿ ಹುಚ್ಚಾಚಾರ್ಯರು ಈ ಲಕ್ಷ್ಮೀದೇವಿ ಮೇಲೆ ದೊಡ್ಡಪದವನ್ನು ಮಾಡಿರುವರು.

ಆಂಧ್ರಕ್ಕೆ ಸೇರಿದ ಕರ್ನೂಲು ಜಿಲ್ಲೆಯ ಹತ್ತಿರ ನಿವೃತ್ತ ಸಂಗಮವೆಂದು

ಆರುನದಿಗಳು ಕೃಷ್ಣ, ವೇಣಿ, ಮ್ಲಾಪಹಾರಿ, ಭೀಮರತಿ, ತುಂಗಭದ್ರ, ಭವನಾಶಿನಿ, ಎಂದು ನದಿಗಳ ಪವಿತ್ರವಾದ ಸಂಗಮವಿದೆ. ಈಗ ಅಲ್ಲಿ ಅಣೆಕಟ್ಟು ಆಗಿರುವುದರಿಂದ ಆ ಕ್ಷೇತ್ರವು ನೀರಿನಲ್ಲಿ ಮುಳುಗಿ ಹೋಗಿದೆ. ಅಲ್ಲಿರುವ ಶ್ರೀ ಸತ್ಯನಿಧಿ ತೀರ್ಥರ ಮೂಲ ಬೃಂದಾವನವನ್ನು ಕರ್ನೂಲಿಗೆ ಶ್ರೀ ಉತ್ತರಾಧಿ ಮಠಾಧೀಶರು ಸ್ಥಳಾಂತರಿಸಿ ಕರ್ನೂಲಿನಲ್ಲಿ ಪ್ರತಿಷ್ಠಿಸಿರುವರು. ನದೀ ಸಂಗಮಗಳಲ್ಲಿ ಸ್ನಾನಾದಿಗಳು ಭಗವಧಾರಾಧನೆ ಮಾಡುವುದರಿಂದ ಪಾಪ ನಿವೃತ್ತಿಯಾಗಿ ಪುಣ್ಯ ಹೆಚ್ಚುವುದು.

## ಶ್ರೀಶೈಲ

ಕರ್ನೂಲು ಅಥವಾ ನಂದ್ಯಾಲಿನಿಂದ ಬಸ್ಸಿನಲ್ಲಿ ಹೋದರೆ ಶ್ರೀಶೈಲ ಕ್ಷೇತ್ರ ಬರುವುದು. ಇಲ್ಲಿ ಮಲ್ಲಿಕಾರ್ಜುನನ ದೇವಸ್ಥಾನವಿದೆ. ಪಾರ್ವತಿ ಪರಮೇಶ್ವರರು ಭಕ್ತರ ಅಭೀಷ್ಟದಂತೆ ಕೈಲಾಸದಿಂದ ಸ್ವಯಂ ಇಲ್ಲಿಗೆ ಬಂದು ನೆಲೆಸಿರುವರು ಎಂದು ಪ್ರಸಿದ್ಧಿ. ಇಲ್ಲಿ ಪವಿತ್ರವಾದ ಪಾತಾಳ ಗಂಗಾನದಿ ಇದೆ. ಜೀವಮಾನದಲ್ಲಿ ಒಮ್ಮೆ ಆದರೂ ಶ್ರೀಶೈಲ ಕ್ಷೇತ್ರಕ್ಕೆ ಬಂದು ಪಾತಾಳಗಂಗಾ ಸ್ನಾನ ಮಾಡಿ ರುದ್ರದೇವರ ದರ್ಶನ ಪಡೆಯಬೇಕು ಅಂತಾರೆ.

**ಧವಳ ಗಂಗೆಯ ಗಂಗಾಧರ ಮಹಾಲಿಂಗ**
**ಮಾಧವನ ತೋರಿಸಯ್ಯ ಗುರುಕುಲ ತುಂಗ**

**ಚೆನ್ನಪ್ರಸನ್ನ ಶ್ರೀ ಹಯವದನನ್ನ**
**ಅನುದಿನ ನೆನೆವಂತೆ ಮಾಡೋನಿಯನ್ನ**
**ಅನ್ಯಾನು ನಾನಲ್ಲ ಗುರುವೆಂಬೆ ನಿನ್ನ**
**ಇನ್ನಾದರು ದಯ ತೋರೋ ಮುಕ್ಕಣ್ಣ ||**

ಎಂದು ಶ್ರೀ ವಾದಿರಾಜರು ಹಾಡಿರುವರು.

## ಅಹೋಬಲ

ನಂದ್ಯಾಲ ಅಥವಾ ಕಡಪಾದಿಂದ ಬಸ್ಸಿನಲ್ಲಿ ಹೋದರೆ ಅಹೋಬಲ ಎಂಬ ದಿವ್ಯ ಕ್ಷೇತ್ರ ಬರುವುದು. ಇಲ್ಲಿ ಪರಮಪಾವನವಾದ ನರಸಿಂಹ ದೇವರ ದೇವಸ್ಥಾನ ಬರುವುದು. ಇಲ್ಲೇ. ಲಕ್ಷ್ಮೀನಾರಸಿಂಹ ದೇವರ ಅವತಾರವಾಗಿದೆ ಎಂದು ಪುರಾಣ ಪ್ರಸಿದ್ಧ. ನರಕಾಸುರ ಸಿಂಹಾಕಾರ ಹೊಂದಿದ ಶ್ರೀ ಲಕ್ಷ್ಮೀ ನರಸಿಂಹ ದೇವರು ದುಷ್ಟ

ಶಿಕ್ಷಕ ಶಿಷ್ಟರ ರಕ್ಷಕನಾಗಿ ಸಜ್ಜನರನ್ನು ಉದ್ಧರಿಸುವನು. ಅಹೋಬಲ ಕ್ಷೇತ್ರವು ಭವನಾಶಿನಿ ನದಿ ತೀರದಲ್ಲಿದೆ. ನಂದ್ಯಾಲ್ ಹತ್ತಿರ ಮಹಾನಂದಿ ಕ್ಷೇತ್ರವಿದೆ. ಕಡಪಕ್ಕೆ 40 ಕಿಲೋಮಿಟರ್ ದೂರದಲ್ಲಿ ಕುಂಪಣಿಪುರ ಎಂಬ ಮಾದರಿಯ ಬ್ರಾಹ್ಮಣ ಅಗ್ರಹಾರವಿದೆ, ಈ ಬ್ರಾಹ್ಮಣ ಅಗ್ರಹಾರವು ವೇದಘೋಷಗಳಿಂದ ತುಂಬಿ ತುಳುಕುತ್ತ ಬಾವುದಾ ನದಿ ತೀರದಲ್ಲಿದೆ. ಇಲ್ಲಿ ಪ್ರಾಣದೇವರನ್ನು ಸ್ವಪ್ನ ಸೂಚನೆಯಂತೆ (ಇಭರಾಮಪುರ) ಶ್ರೀ ಅಪ್ಪಾ ಅವರು ಪ್ರತಿಷ್ಠಿಸಿರುವರು. ಉಪ್ಪಿನಕಾಯಿ ಹನುಮಪ್ಪ ಎಂದು ಈತನಿಗೆ ಹೆಸರು.

ಕಡಪ ಹತ್ತಿರ ಗಂಡಿ ಎಂದು ಪವಿತ್ರ ಕ್ಷೇತ್ರ ಪಾಪಾಗ್ನಿ ನದೀ ತೀರದಲ್ಲಿದೆ. ಇಲ್ಲಿ ನದೀ ತೀರದಲ್ಲಿ ಸಣ್ಣ ಬೆಟ್ಟದ ಮೇಲೆ ಪ್ರಾಣ ದೇವರ ದೇವಸ್ಥಾನವಿದೆ. ಈ ಪ್ರಾಣ ದೇವರನ್ನು ರಾಮದೇವರು ಲಂಕೆಗೆ ಹೋಗುವ ಮಾರ್ಗಮಧ್ಯದಲ್ಲಿ ತಮ್ಮ ಸ್ವಹಸ್ತದಿಂದ ಬಿಲ್ಲಿನಿಂದ ಈ ಹನುಮಪ್ಪನು ಬರದಂತೆ ರಾತ್ರಿ ಬರೆದು ಬೆಳಗಾಗುತ್ತಿರಲು ಮುಂದಕ್ಕೆ ಹೊರಟರಂತೆ. ಅವಸರದಲ್ಲಿ ಪ್ರಾಣದೇವರ ಕಿರುಬೆರಳು ಮಾತ್ರ ಬರಿಯಲಿಲ್ಲವಂತೆ, ಇಂದಿಗೂ ಆ ಪ್ರಾಣ ದೇವರಿಗೆ ಕಿರುಬೆರಳು ಇಲ್ಲ. ಇಲ್ಲಿ ಬಹಳ ಜಾಗೃತಿ ಸ್ಥಳ, ಬೇಡಿದಿಷ್ಟಾರ್ಥಗಳನ್ನು ಭಕ್ತಾದಿಗಳು ಪಡೆಯುವರು. ಇದು ಮಂಡ್ರೈಥಾಮಸ್. ಇವರಿಗೆ ಗಂಡಿಪ್ರಾಣದೇವರು ದರುಶನಕೊಟ್ಟರಂತೆ! ಜಿಲ್ಲಾ ಗೆಜಿಟ್‌ನಲ್ಲಿ ಇದೆ. ಮಂತ್ರಾಲಯದಲ್ಲಿ ಸಹ ಥಾಮಸ ಮುಂಡ್ರೊಗೆ, ರಾಯರು ದರಶನ ಕೊಟ್ಟರೆಂದು ಗೆಜಿಟಿನಲ್ಲಿದೆ. ಇವರು ಹಿಂದನ ಜನ್ಮದಲ್ಲಿ ಮಾಂಡವ್ಯ ಋಷಿಗಳಾಗಿದ್ದರೇನೊ ಎಂದು ಜನರಲ್ಲಿ ಅನಿಸಿಕೆ.

ಆಂಧ್ರಕ್ಕೆ ಮುಖ್ಯ ಪಟ್ಟಣವಾದ ಹೈದ್ರಾಬಾದ್ ಹತ್ತಿರ ಪವಿತ್ರವಾದ ಗೋದಾವರಿ ನದೀ ತೀರದಲ್ಲಿ ಭದ್ರಾಚಲವೆಂಬ ಊರು ಇದೆ, ಆ ನದೀತೀರದಲ್ಲಿರುವ ಬೆಟ್ಟದ ಮೇಲೆ ಭವ್ಯವಾದ ಶ್ರೀರಾಮದೇವರ ದೇವಸ್ಥಾನವಿದೆ, ಅಲ್ಲಿ ಸೀತಾರಾಮರ ವಿಗ್ರಹವು ಬಹು ಸುಂದರವಾಗಿ ಇದೆ. ಶ್ರೀರಾಮನು, ಸೀತಾ, ಲಕ್ಷ್ಮಣರೊಡನೆ ವನವಾಸಕ್ಕೆ ಹೋಗುವಾಗ ದಂಡಕಾರಣ್ಯ ಪ್ರವೇಶ ಮಾಡಿದ್ದು ಈ ಭದ್ರಾಚಲ ಹತ್ತಿರವೇ ಎಂದು ಸ್ಥಳ ಪುರಾಣದಲ್ಲಿದೆ. ಇಲ್ಲಿ ಅಗಸ್ತ್ಯ ಋಷಿಗಳ ಆಶ್ರಮದಲ್ಲಿ ಶ್ರೀರಾಮನು ಇದ್ದು ಆ ಪ್ರಾಂತದಲ್ಲೇ ರಾವಣನು ತೆಗೆದುಕೊಂಡು ಹೋಗಿದ್ದು ಮಾಯಾ ಜಿಂಕೆ ಬಂದಿದ್ದು, ಎಂದು ಹೇಳುವರು. ಜಗನ್ಮಾತೆಯಾದ ಸೀತಾದೇವಿ, ಅಲ್ಲಿ ಗೋದಾವರಿಯಲ್ಲಿ ಮಿಂದು ಗೋದಾದೇವಿಗೆ ಮರದ ಬಾಗಿನವನ್ನು ಕೊಟ್ಟಳಂತೆ. ಅಲ್ಲೇ ಶಬರಿ ಶ್ರೀರಾಮನಿಗೆ

ಹಣ್ಣುಗಳನ್ನು ಸಮರ್ಪಿಸಿದಳು. ಶಬರಿಗೆ ಮೋಕ್ಷವನ್ನು ಕೊಟ್ಟನು. ಇಲ್ಲಿ ಶಬರಿತೀರ್ಥವಿದೆ.

ಕಡಪಾದಲ್ಲಿ ಶ್ರೀ ವೆಂಕಟೇಶನ ದೇವಸ್ಥಾನ ಬಹಳ ದೊಡ್ಡದಾಗಿದೆ. ಇದಕ್ಕೆ ''ದೇವರ ಕಡಪ'' ಅನ್ನುತ್ತಾರೆ, 'ಗಡಪ' ಅಂದರೆ ತೆಲುಗುನಲ್ಲಿ ಹೊಸ್ತಿಲು ಎಂದು ಅರ್ಥ. ಈ ಊರು ತಿರುಪತಿ ತಿರುಮಲೇಶನ ಮಂದಿರಕ್ಕೆ ಹೊಸ್ತಿಲು ಇದ್ದಹಾಗೆ ಎಂದು ಪ್ರತೀತಿ, ಶ್ರೀ ವೆಂಕಟೇಶನ ವಿಗ್ರಹವು ಅತಿ ಸುಂದರವಾಗಿದೆ. ಇಲ್ಲಿ ಎಲ್ಲಾ ಉತ್ಸವಾದಿಗಳು ನಡೆಯುತ್ತವೆ. ಗಡಪ ಹೋಗಿ ಕಡಪ ಆಗಿದೆ. ಈ ಊರು ರೇಣಿ ಗುಂಟಕ್ಕೆ ಬಹಳ ಹತ್ತಿರವಿದೆ.

ಕಡಪ ಹತ್ತಿರ ನೆಲ್ಲೂರು ಎಂಬ ಊರು ಪಿನಾಕಿನಿ ನದಿ ತೀರದಲ್ಲಿದೆ. ಇಲ್ಲಿ ತಲ್ಪಗಿರಿ ರಂಗನಾಥನ ದೇವಸ್ಥಾನವಿದೆ. ರಂಗನಾಥನ ವಿಗ್ರಹವು ಶ್ರೀರಂಗ ಕ್ಷೇತ್ರದಲ್ಲಿ ಇದ್ದಹಾಗೆ ಬಹಳ ಸುಂದರವಾಗಿ ಅದೇ ರೀತಿಯಲ್ಲಿದೆ. ಇವನನ್ನು ವಶಿಷ್ಠ ಋಷಿಗಳು ಪ್ರತಿಷ್ಠಿಸಿದರಂತೆ. ಉತ್ಸವಾದಿಗಳು ಬಹಳ ವಿಜೃಂಭಣೆಯಿಂದ ನಡಸುವರು. ಉತ್ಥಾನ ದ್ವಾದಸಿ ದಿನ ಶ್ರೀ ರಂಗನಾಥನ ಗರುಡೋತ್ಸವವು ಬಹಳ ಚೆನ್ನಾಗಿ ನಡೆಯುತ್ತಿದೆ. ಈ ಗರುಡೋತ್ಸವವು 190 ವರ್ಷಗಳಿಂದ ನಡೆಯುತ್ತಾ ಇದೆ ಎಂದು ಪ್ರಸಿದ್ಧಿ ಇದೆ. ನೆಲ್ಲೂರಿನಲ್ಲಿ ಸಮುದ್ರವೂ ಇದೆ. ನೆಲ್ಲೂರು, ಕಡಪ, ಕರ್ನೂಲು, ನಂದ್ಯಾಲ ಇವೆಲ್ಲಾ ಅಂಧ್ರಕ್ಕೆ ಸೇರಿದ್ದು, ಈ ಊರುಗಳು ತಿರುಪತಿಗೆ ಸಮೀಪದಲ್ಲಿವೆ. ತಿರುಪತಿಯಲ್ಲಿ ತಿರುಮಲೇಶನ ದರ್ಶನ ಪಡೆದು ಬೆಂಗಳೂರಿಗೆ ಬರುವ ದಾರಿಯಲ್ಲಿ ಪವಿತ್ರವಾದ ಮುಳುಬಾಗಿಲು ಕ್ಷೇತ್ರ ಬರುವುದು. ಇಲ್ಲಿ ದೈವಾಂಶ ಸಂಭೂತರು ಪ್ರಾತಃ ಸ್ಮರಣೀಯರಾದ ಶ್ರೀ ಶ್ರೀ ಪಾದರಾಜರ ಬೃಂದಾವನವಿದೆ. ಇಲ್ಲಿ ನರಸಿಂಹದೇವರು ಮತ್ತು ಪ್ರಾಣ ದೇವರ ಗುಡಿಯಿದೆ. ಇಲ್ಲಿರುವ ಪವಿತ್ರವಾದ ನರಸಿಂಹ ತೀರ್ಥದಲ್ಲಿ ಶ್ರೀ ಶ್ರೀ ಪಾದರಾಜರು ತಮ್ಮ ಶಿಷ್ಯರ ಅಭೀಷ್ಟದಂತೆ ನರಸಿಂಹ ತೀರ್ಥದಲ್ಲಿ ಗಂಗೆಯನ್ನು ತರಿಸಿರುವರು. ಶ್ರೀ ಶ್ರೀಪಾದರಾಜರು ಪ್ರತಿ ದಿವಸ 64 ದಿನಸಿ ಅಡಿಗೆ ಮಾಡಿಸಿ ದೇವರ ನೈವೇದ್ಯ ಮಾಡುತ್ತಿದ್ದರಂತೆ.

ಇವರು ಶ್ರೀ ವ್ಯಾಸರಾಜರಿಗೆ ವಿದ್ಯಾಗುರುಗಳು. ಶ್ರೀ ಮಧ್ವಾಚಾರ್ಯರು ಬದರಿಕಾಶ್ರಮದಿಂದ ತಂದಿರುವ ವ್ಯಾಸ ಮುಷ್ಟಿಗಳಲ್ಲಿ ಇಲ್ಲಿ ಒಂದು ಇರುವುದು. ಆ ವ್ಯಾಸಮುಷ್ಟಿ ಯಾರಿಗೂ ತೆಗೆಯುವುದಕ್ಕೆ ಬರುವುದಿಲ್ಲ. ಒಂದು ದಿನ ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಜರಿಗೆ, ದೇವರ ಪೂಜೆಗೆಲ್ಲಾ ಸಿದ್ಧಮಾಡಲು ಹೇಳಿ ತಾವು ಸ್ವಲ್ಪ

ತಡವಾಗಿ ಸ್ನಾನಮಾಡುವುನೆಂದು ಹೇಳಿದರು. ವ್ಯಾಸ ರಾಜರು ದೇವರ ಪೂಜೆಗೆಲ್ಲಾ ಸಿದ್ಧಪಡಿಸಿ ವ್ಯಾಸಮುಷ್ಟಿಯನ್ನು ಸುಲಭವಾಗಿ ತೆರೆದರು. ಶ್ರೀಕೃಷ್ಣನು ಅಲ್ಲಿ ಪ್ರತ್ಯಕ್ಷನಾಗಿ ನಾಟ್ಯಮಾಡುತ್ತಿದ್ದನು. ವ್ಯಾಸಮುಷ್ಟಿಯಿಂದ ವ್ಯಾಸರಾಜರು ತಾಳ ಹಾಕುತ್ತಿರಲು ಕೃಷ್ಣನ ಕಾಲ್ಗೆಜ್ಜೆ ಧ್ವನಿ ಕೇಳಿಸಿ ಕೊಂಡು ಶ್ರೀ ಪಾದರಾಜರು ಬಗ್ಗಿ ನೋಡಿ ಅತ್ಯಂತ ಆನಂದಭರಿತರಾದರಂತೆ. ಇಬ್ಬರು ಮಹನೀಯರೂ ಶ್ರೀ ಹರಿಭಕ್ತರು, ಒಬ್ಬರು ದೈವರಾಜರಾದರೆ, ಇನ್ನೊಬ್ಬರು ಪ್ರಹ್ಲಾದರಾಜರು.

ರಾಗ-ನಾದ ನಾಮಕ್ರಿಯ

**ಕುಣಿ ಕುಣಿಯೋ ರಂಗಾ। ಕುಣಿ ಕುಣಿಯೋ ವಿಠಲ**
**ಕುಣಿಕುಣಿಯೋ ಗೋಪಿ ಕೃಷ್ಣಯ್ಯಾ ॥**

1. **ವ್ಯಾಸರಾಜರು ನಿನ್ನ ಕುಣಿಸಿದರಂತೆ**
**ವ್ಯಾಸಮುಷ್ಟಿಂದೆ ತಾಳ ಹಾಕಿದರಂತೆ**
**ಶ್ರೀಪಾದರಾಜರದನು ನೋಡಿದರಂತೆ**
**ಸಂತಸ ಸಂಭ್ರಮದಿ ಹರುಷಪಟ್ಟರಂತೆ ॥**

2. **ಎಡಗಾಲೆತ್ತುತ ಬಲಗಾಲ್ಮೆಟುತ**
**ಕಡಗೋಲ ಕೃಷ್ಣನ ಕೊಳಲನೂದುತ**
**ಝಣ ಝಣರೆನ್ನುತ ಗೆಜ್ಜೆ ಪಾಲ್ಗಡಗದಿ**
**ನಾಟ್ಯವಾಡಿದನೀ ನಾಗಶಯನನೆ ॥**

3. **ಮೇಧಿನಿಯೊಳು ಪ್ರತಿ ಕಣಗಳೆಣಿಸಲು।**
**ಶಕ್ಯವು ನಿನ್ನ ಕೃಪೆಯಿಂದೇ।**
**ಕಪಿಲನಾಮಕ ನಿನ್ನ ಅಗಣಿತಗುಣಗಳು**
**ತಿಳಿಯಲಸಾಧ್ಯವು ಶ್ರೀಹರಿಯೇ ॥**

ಈ ಇಬ್ಬರು ಬಾಲಕರ ಭಕ್ತಿಗೆ ಮೆಚ್ಚಿ ಪರಮ ಕರುಣನಾದ ಪರಮಾತ್ಮನು ಇವರಿಗಾಗಿ ಅವತಾರವನ್ನೇ ತಾಳಿದನು (ದೈವ ಪ್ರಹ್ಲಾದ).

ಮುಳಬಾಗಿಲಿನಿಂದ ಬೆಂಗಳೂರಿಗೆ ಬಂದು ಅಲ್ಲಿಂದ ಮೈಸೂರಿಗೆ ಹೋಗುವ ಮಾರ್ಗದಲ್ಲಿ ಶೇಷ ಚಂದ್ರಿಕಾಚಾರ್ಯರಿರುವ ಪವಿತ್ರವಾದ ಸ್ಥಳದಲ್ಲಿ ತಿರುಮಕುಂಡಲ

ಎಂದು ಮೂರುನದಿಗಳು ಕಲೆಯುವ ಪವಿತ್ರ ಸ್ಥಳದಲ್ಲಿ ಸ್ನಾನಾದಿಗಳನ್ನಾಚರಿಸಿ ದರ್ಶನ, ಪ್ರಸಾದ ಸ್ವೀಕರಿಸಿ, ಅಲ್ಲಿಂದ ಬಿಳಿಗಿರಿರಂಗನ ಬೆಟ್ಟಕ್ಕೆ ಹೋಗತಕ್ಕದ್ದು. ಇಲ್ಲಿ ತಿರುಪತಿಯಲ್ಲಿ ಇದ್ದ ಹಾಗೆ ಶ್ರೀ ಶ್ರೀನಿವಾಸದೇವರು ಇದ್ದಾರೆ. ಈತನ ಕೈಯಲ್ಲಿ ದುಷ್ಟ ಶಿಕ್ಷಣೆಗಾಗಿ ಕತ್ತಿ ಹಿಡಿದಿರುವನು. ಪವಿತ್ರವಾದ ಭಾರ್ಗವಿ ನದಿ ಇದೆ. ಇಲ್ಲಿ ವಸಿಷ್ಠರು ತಪಸ್ಸು ಮಾಡಿದ ಜಾಗ. ಹರಿಪಾದಗಳು ಇವೆ. ಭಾರ್ಗವಿ ನದಿಯಲ್ಲಿ ಸ್ನಾನ ಮಾಡಿ ಸ್ತ್ರೀಯರು ಮರದ ಬಾಗಿನವನ್ನು ಕೊಟ್ಟರೆ ಋಷಿಪಂಚಮಿ ವ್ರತ ಮಾಡಿದ ಫಲವೆಂದು ಹಿರಿಯರು ಹೇಳುತ್ತಾರೆ.

ತಿರುಗಿ ಬೆಂಗಳೂರಿಗೆ ಬರುವಾಗ ದೊಡ್ಡ ಪಟ್ಟಣವಾದ ಮೈಸೂರು ನೋಡಿಕೊಂಡು ಅಲ್ಲಿ ನೋಡತಕ್ಕ ಜಾಗಗಳು ಬಹಳ ಇವೆ. ಅವುಗಳನ್ನು ನೋಡಿ ಶ್ರೀರಂಗಪಟ್ಟಣದ ಶ್ರೀ ರಂಗನಾಥನ ದರುಶನ ಪಡೆದು. ದಾರಿಯಲ್ಲಿ ಅಬ್ಬೂರು ಮಳೂರು ಪವಿತ್ರ ಜಾಗ ನೋಡತಕ್ಕದ್ದು. ಮಳೂರು ದೇವಾಲಯದಲ್ಲಿ ಡೊಗ್ಗಾಲು ಕೃಷ್ಣನು ಬಹಳ ಮುದ್ದಾಗಿರುವನು. ಅವನ ದರ್ಶನ ಪಡೆಯತಕ್ಕದ್ದು. ಈ ಕೃಷ್ಣನ ಎದುರಿನಲ್ಲಿ ಶ್ರೀ ಪುರಂದರ ದಾಸರು –

**"ಜಗದೋದ್ಧಾರನ ಮಗನೆಂದು ತಿಳಿದು ಆಡಿಸಿದಳು ಯಶೋಧೆ."**

ಎಂದು ಹಾಡಿರುವರು. ಅಲ್ಲಿಂದ ಬೆಂಗಳೂರಿಗೆ ಬಂದು ಅಲ್ಲಿ ಉತ್ತರಾಧಿಮಠ ಮತ್ತು ವಿದ್ಯಾಪೀಠವನ್ನು ಸಂದರ್ಶಿಸಿ ಶ್ರೀರಾಮ, ಶ್ರೀ ಕೃಷ್ಣರ ದರ್ಶನ ಪಡೆದು, ಜಯತೀರ್ಥರ ಬೃಂದಾವನ, ವಾದಿರಾಜರ ಬೃಂದಾವನ, ಶ್ರೀ ರಾಘವೇಂದ್ರರ ಬೃಂದಾವನ ದರ್ಶನ ಪಡೆದು ಯತಿಗಳಿಗೆ ಪಾದ ಪೂಜಾದಿಗಳನ್ನು ಮಾಡಿ ಶ್ರೀ ಹರಿವಾಯು ಗುರುಗಳ ಆಶೀರ್ವಾದಗಳನ್ನು ಪಡೆದು ಸುರಕ್ಷಿತವಾಗಿ ತೀರ್ಥಯಾತ್ರೆ ಮಾಡಿಸಿ ತಮ್ಮ ತಮ್ಮ ಸ್ವಸ್ಥಳಕ್ಕೆ ಸೇರಿಸಿ ಶ್ರೀ ವೆಂಕಟೇಶನಿಗೆ ಅನಂತಾನಂತ ನಮಸ್ಕಾರಗಳನ್ನು ಸಮರ್ಪಣೆ ಮಾಡತಕ್ಕದ್ದು. ಪ್ರತಿಯೊಂದುಕಾರ್ಯಕ್ಕೆ ಭಗವಂತನು ಕೊಟ್ಟಿರುವ ದತ್ತ ಸ್ವಾತಂತ್ರವನ್ನು, ಭಗವಂತನನ್ನು ನಂಬಿ ಮನುಷ್ಯಪ್ರಯತ್ನ ಮಾಡಬೇಕು, ಅದರ ಮೇಲೆ ದೈವಾನುಗ್ರಹ ಇರಬೇಕು. ದೈವೀಚ್ಛೆ ಇದ್ದರೇನೇ ಯಶಸ್ಸು ಕಾರ್ಯ ಸಿದ್ಧಿ ಆಗುವುದು.

**1. ಗಿಡ್ಡ ಹಾರುವನಾಗಿ ಬಡ್ಡಿ ದಾನವ ಬೇಡಿ**
**ದುಡ್ಡು ಕಾಸಗಳಿಗೆಕಯ್ಯನೊಡ್ಡಿ**

ಅಡ್ಡ ಬಿದ್ದ ಜನರ ವಿಡ್ರೋಗಳ ಕಳೆದು
ದೊಡ್ಡವರ ಮಾಳ್ಪಶಿರಿ ವಿಜಯವಿಠಲಗೆ ॥
ಜಯಮಂಗಳಂ ನಿತ್ಯ ಶುಭಮಂಗಳಂ ॥

2. ತ್ರಿಕಾಲಗಳಲ್ಲಿ ಮಾಡಿದ ಸತ್ಕಾಕಾರ್ಯಗಳು
ಶ್ರೀಪತಿ ಅಂತರ್ಗತ ಶ್ರೀಗುರುಮಧ್ವಾಂತರ್ಗತ ಶ್ರೀ ಗೋಪಾಲಕೃಷ್ಣ
ಪ್ರಿಯತಾಂ ಪ್ರೀತೋಭವತು ॥

''ನದಿ ಅಭಿಮಾನಿ ದೇವತಾಮೂರ್ತಿಗಳನ್ನು ಸ್ನಾನ ಕಾಲದಲ್ಲಿ ಸ್ಮರಿಸಬೇಕು''

1. ಗಂಗಾನದಿಯಲ್ಲಿ ಶಂಖ ಚಕ್ರಗದಾ ಪದ್ಮ ಧಾರಿಯಾದ ಮಾಧವನನ್ನು
ಸ್ನಾನ ಕಾಲದಲ್ಲಿ ಧ್ಯಾನ ಮಾಡಬೇಕು ॥

2. ಗೋದಾವರಿಯಲ್ಲಿ ನಾರಾಯಣನನ್ನು ಧ್ಯಾನಮಾಡಬೇಕು ॥

3. ಕೃಷ್ಣ ವೇಣಿಯಲ್ಲಿ ಶ್ರೀಕೃಷ್ಣ ಪರಮಾತ್ಮನನ್ನು ಧ್ಯಾನಮಾಡಬೇಕು ॥

4. ಕಾಲಿಂದಿಯಲ್ಲಿ ( ಯಮುನಾನದಿ ) ಶ್ರೀಹರಿಯನ್ನು ಧ್ಯಾನಿಸಬೇಕು ॥
ಸರಸ್ವತಿಯಲ್ಲಿ ಪದ್ಮನಾಭನನ್ನು । ಕಾವೇರಿಯಲ್ಲಿ ಶ್ರೀರಂಗನಾಥನನ್ನು ।
ಸರಯು ನದಿಯಲ್ಲಿ ಶ್ರೀರಾಮನನ್ನು । ಸಮರದ ನದಿಯಲ್ಲಿ ಶ್ರೀ ವಿಷ್ಣುವನ್ನು
ತುಂಗಭದ್ರೆಯಲ್ಲಿ ವರಾಹಮೂರ್ತಿಯನ್ನು । ಸಮುದ್ರದಲ್ಲಿ ಕ್ಷೀರಶಾಯಿ
ಯನ್ನು । ಭವನಾಶಿನಿಯಲ್ಲಿ ಶ್ರೀನರಸಿಂಹನನ್ನು । ಕುಮದ್ವತಿಯಲ್ಲಿ
ತ್ರಿವಿಕ್ರಮನನ್ನು । ಮಂಜುಳನದಿಯಲ್ಲಿ ಹಯಗ್ರೀವನನ್ನು । ಭೀಮರಥಿ
ಯಲ್ಲಿ ಶ್ರೀಧರನನ್ನು । ತಾಮ್ರ ಪರಣೆಯಲ್ಲಿ ಅನಂತನನ್ನು । ಮಲಾಪಹಾರಿ
ಯಲ್ಲಿ ಜನಾರ್ಧನನ । ಪಿನಾಕಿನಿ ನದಿಯಲ್ಲಿ ಕೇಶಿನಾಯಕನನ್ನು । ಸಂಗಮನದಿ
ಯಲ್ಲಿ ಕೇಶವನನ್ನು । ಸರೋವರದಲ್ಲಿ ದತ್ತಾತ್ರೇಯನನ್ನು । ಈ ಪ್ರಕಾರ
ಆಯಾ ನದಿಗಳಲ್ಲಿ ಸ್ನಾನಕಾಲದಲ್ಲಿ ಸ್ಮರಿಸತಕ್ಕದ್ದು ॥

॥ ಗಂಗಾಧ್ಯಾನಶ್ಲೋಕ ॥

ಹೇ ಗಂಗೆ ತವಕೋಮಲಾಂಘ್ರಿ ನಲನಲ ರಂಭೋರುನೀ ವೀಲಸತ್ ।
ಕಾಂಚಿಧಾಮತನೂದರಂ । ಘನಕುಚವ್ಯಾಕೀರ್ಣ್ಯ ಹಾರಂವಪುಃ ।

ಸನ್ಮುದ್ರಾಂಗದ ಕಂಕಣಾವೃತಕರಂ ಸ್ಫುರಂಸ್ಪುರಕುಂಡಲಂ।
ಸಾರಂಗಾಕ್ಷಿ ಜಲಾನ್ಯದಿಂದುರುಚಯೇ ಜಾನಂತಿತೇನ್ವೆಜಲಾತ್ ॥

॥ ಈ ಶ್ಲೋಕವನ್ನು ಹೇಳಿ ವೈಷ್ಣವರು
ನದಿ ಅಭಿಮಾನಿ ದೇವತಾ ಸ್ತೋತ್ರ।

1. ಗಂಗಾಯಾಂ ಮಾಧವೋ ದೇವ : ಶಂಖಚಕ್ರ ಗಧಾಧರಃ
ಲಸತ್ಪದ್ಮಾಧರೋ ಧ್ಯೇಯಸ್ತತ್ರ ಸ್ನಾನಂ ನರೇಶ್ವರ ॥

2. ಗೋದಾವರ್ಯಾಂ ಮಹಾನದ್ಯಾಂ ವೀರ ನಾರಾಯಣೋನೃಪ
ಶಂಖಚಕ್ರ ಗದಾ ಪದ್ಮೈ ಶೋಭಿತೋಧ್ಯೆ ಯ ಏವಹಿ ॥

3. ಕೃಷ್ಣ ವೇಣ್ಯಾಂ ನೃಪ ಶ್ರೇಷ್ಠ ಕೃಷ್ಣಃ ಸಾಕ್ಷಾಜ್ಜನಾರ್ಧನಃ
ಚತುರ್ಬಾಹರ್ಮಹಾತೇಜಃ ಶಂಖಚಕ್ರಾಸಿಶಾರ್ಙ್ಗದಕ್ ॥

4. ಕಾಲಿಂದ್ಯಾಯಮಪುತ್ರಶ್ಚ ಕೃಷ್ಣನಾಮಾ ಹರಿರ್ನೃಪಃ
ಚತುರ್ಬಾಹಧ್ಯೇ ಸದಾಧ್ಯೇಯೋ ದಂಡಶಂಖಾರಿ ಶಾರಿಙ್ಗದೃಕ್ ॥

5. ಸರಸ್ವತ್ಯಾಂ ಮಹಾಭಾಗಾ ಪದ್ಮನಾಭೋ ಹರಿನೃಪಃ
ಕಾವೇರ್ಯಾಂ ರಂಗನಾಥಂ ಸರಯೂಂ ರಾಮಮೇವಚ ॥

6. ನರ್ಮದಾಯಾಂ ಮಹಾವಿಷ್ಣು ಚತುರ್ಬಾಹುಂ ನೃಪೋತ್ತಮಃ
ವರಹಾ ತುಂಗಭದ್ರಾಯಾಂ ಸಿಂಧಾಕ್ಷೀರಾಧ್ದಿಶಾಯಿನಂ ॥

7. ನೃಸಿಂಹಂ ಭವನಾಶಿನ್ಯಾಂ ಕುಮುದ್ವತ್ಯಾಂ ತ್ರಿವಿಕ್ರಂ
ಮಂಜುಲಾಯಾಂ ಹಯಗ್ರೀವಂ ಭಿಮರತ್ಯಾಂತು ಶ್ರೀಧಮರಂ

8. ಅನಂತಂತಾಮ್ರ ಪರ್ಣ್ಯಾಂತು ಮಲಾಪಾರ್ಯಾಂ ಜನಾರ್ಧನಂ
ಪಿನಾಕಿನ್ಯಾಂ ಮಹಾಭಾಗಾ ಕೇಶವಂ ಕೇಶಿನಾಶನಮ್

9. ಪದ್ಮ ಶಂಖಾರಿಯುಕ್ತಂಚ ಗಧಯಾ ಪರಿಶೋಭಿತಂ
ಪ್ಸತರ್‌ಸಾಗರ ಗಾಮಿಸ್ಸೋ ಯೊ ಸಧ್ಯ: ಸಂತಿ ಭೂತಲೇ ॥

10. ತಾಸು ಸರ್ವಾಸು ರಾಜೇಂದ್ರ ಕೇಶವಾದೀಂಶ್ಚ ಸಂಸ್ಮರೇತ್
ಸರೋವರೇಷುರಾಜೇಂದ್ರ ದತ್ತಾತ್ರೇಯಂ ಸ್ಮರೇತ್ ಸದಾ ॥

11. ಸ್ವಾಮಿ ಪುಷ್ಕರಿಣೀ ತೀರ್ಥ ಶ್ರೀ ಭೂಮಿ ಸಹಿತಂ ವಿಭುಮ್
ಕಟಿಸ್ತಪಾದಮಬಾಹುಂ ತಂ ವರದೇನಕರೇಣಚ

12. ಯುಕ್ತಂ ಶಂಖಾರಿಯುಕ್ತಂ ಚ ಪ್ರಸನ್ನ ಧೋಕ್ಷಜಂ ಸ್ಮರೇತ್।
ವಾಮನಂ ಸಂಸ್ಮರೆ ದ್ರಾಜನ್ ಚಂದ್ರ ಪುಷ್ಕರಣಿ ಜಲೇ।

13. ಸಂಸ್ಮರೇನ್ನೃಪತಿ ಶ್ರೇಷ್ಠಾಮಾನಸೇ ಮಧುಸೂಧನಂ
ದೇವಖಾತೇಷು ರಾಜೇಂದ್ರ ಸಂಸ್ಮರೇತು ಗಧಾಧರಂ ॥

## ನದೀತಾರತಮ್ಯಸ್ತೋತ್ರಂ:

1. ವಿಷ್ಣುಪಾದಾಬ್ಜ ಸಂಭೂತ ಗಂಗಾ ಸರ್ವಾಧಿಕಾಮತಾ
ತತೋ ಗೋದಾವರೀ ನ್ಯೂನಾಕೃಷ್ಣ ವೇಣ ತತೋಧಮಮ

2. ಸ್ವಾಮಿ ಚಂದ್ರಾ ಪುಷ್ಕರಣ್ಯಾ ಮಾನಸಂಚ ಸರೋವರಂ।
ಕೃಷ್ಣಾ ವೀಣ್ಯಾಂ ಸಮಾಸ್ತಾಭ್ಯ: ಕಾವೇರೀಚ ಸರಸ್ವತೀ ॥

3. ಹೀನೇಸ್ತ್ಯೋನ್ಯ ಸಮೇತಾಭ್ಯ ಮಾನಾಚ ಸರಯುತಥಾ।
ತುಂಗಭದ್ರ ಸಮಾತಸ್ತಾ: ಕಾಲಿಂದ್ಯೋನ್ಯಾತೋಧಮ ॥

4. ನರ್ಮದಾ ಸಿಂಧು ಸರಜಾತತ್ಸಮಭವನಾಶಿನಿ
ತತಃ ಕುಮದ್ವತೀ ನೀಚತತಾನೀಚ ಮಲಾಪಹಾ ॥

5. ತಾಮ್ರಪರ್ಣಿ ಭೀಮರತಿ ಮಂಜುಲಾಚ ಪಿನಾಕಿನಿ।
ಪ್ರೈತಾಕ್‌ಸಾಗರ ಗಾಮಿನ್ಯೋ ಸೆದ್ಯೋ ಭಿಮರತೀಸಮ್ಯಾವಿ

6 ತಥೋನ್ಯೋ ಸರಿತೋ ನೀಚಾಸ್ತಟೀಕಾಶ್ಚತಥೋಮಾಃ
ತತೋನಿಚಾಪುಷ್ಕರಿಣ್ಯೋದೇವ ಖಾತಾಶ್ಚತತ್ಸಮಾಃ ॥

7. ತಥೋವಾಪ್ಯೋಧಮಾಸ್ತಾಭಃ ಕೂಪಾಹಸರ್ವಾಧಮಯತಃ।
ಸ್ತೋತ್ರಮಾರ್ಘ್ಯಂ ಪ್ರದಾತ ವ್ಯಾಪರಾಸುನ್‌ಖಾನ್ಯತ್ ॥

8. ರಾಘುವೇಂದ್ರೇಣ ಯತಿನಾ ಬ್ರಹ್ಮಾಂಡ ಹ್ಯಪುರಾಣಗಃ
ಇತ್ಯದ್ಧ್ರುತಃ ಸಾರಭಾಗೋ ನದೀನೀಚೋಚ್ಚಸೂಚಕಃ ॥

ಶ್ರೀ ರಾಘವೇಂದ್ರ ಸ್ವಾಮಿಗಳಿಂದ ಬ್ರಹ್ಮಾಂಡ ಪುರಾಣದಲ್ಲಿ, ಸಂಗ್ರಹಿಸಲ್ಪಟ್ಟ ನದಿಗಳ ತಾರತಮ್ಯ ಶ್ರೀ ವಿಷ್ಣುವಿನ ಪಾದದಿಂದ ಉತ್ಪನ್ನಳಾದ ಗಂಗೆಯು ಎಲ್ಲಾ ನದಿಗಳಿಗಿಂತಲು ಶ್ರೇಷ್ಠವಾದವಳು. ಆಕೆಗಿಂತ ಗೋದಾವರಿ ಕಡಿಮೆ. ಅಕೆಗಿಂತ ಕೃಷ್ಣವೇಣಿ ಕಡಿಮೆ. ಕೃಷ್ಣವೇಣಿಗೆ ಸ್ವಾಮಿಪುಷ್ಕರಣಿ ಚಂದ್ರಪುಷ್ಕರಣಿ ಮತ್ತು ಮಾನಸ ಸರೋವರಗಳು ಸಮವು। ಇವೆಲ್ಲಕಿಂತಲು ಕಾವೇರಿ, ಸರಸ್ವತಿ ಕಡಿಮೆ. ಬೇರೆ ಇತರ ನದಿಗಳಿಂದ ಕೂಡಿದ ನದಿಗಳಿಂದಲು ಸರಯು ನದಿಕಡಿಮಿ ತುಂಗ ಭದ್ರನದಿಯು ಅದಕೆ ಸಮವು। ಅದಕ್ಕಿಂತಲು ಕಾಳಿಂದಿ (ಯಮುನೆ) ಕಡಿಮೆ. ಯಮುನೆಗಿಂತಲು ನರ್ಮದ ಸಿಂದು ನದಿಗಳು ಕಡಿಮೆ. ಭವನಾಶಿನಿಯು ಇವುಗಳಿಗೆ ಸಮ. ಭವನಾಶಿನಿಗಿಂತಲು ಕುಮದ್ವತಿ ಕಡಿಮೆ. ಅದಕಿಂತಲು ತಾಮ್ರ ಪರಣಿ. ಭೀಮರತಿ ಮಂಜುಳ, ಪಿನಾಕಿನಿ ನೇರವಾಗಿ ಸಾಗರವನ್ನು ಸೇರುವ ನದಿಗಳು ಭೀಮರತಿಗೆ ಸಮವು. ಅದಕ್ಕಿಂತಲು ಉಪನದಿಗಳು ಕಡಿಮೆ. ಅದಕ್ಕಿಂತಲು ಇಳಿಯುವ ಬಾವಿಗಳು. ಅದಕಿಂತಲು ಇತರ ಬಾವಿಗಳು, ಕಡಿಮೆಯಾದವು ಇವುಗಳಲ್ಲಿ ಸ್ನಾನ ಮಾಡುವ ವೇಳೆಯಲ್ಲಿ ಶ್ರೇಷ್ಠವಾದ ನದಿಗಳಿಗೆ ಅರ್ಘ್ಯವನ್ನು ಕೊಟ್ಟು ಉಳಿದ ನದಿಗಳಿಗೂ ಕೊಡಬೇಕು ॥ ಅತಿಕ್ರಮ ಮಾಡಬಾರದು.

## ಶ್ರೀ 30 ಭಾಗವತ ಧರ್ಮಗಳು

1. ಮನಸ್ಸನ್ನು ಬೇರೆಡೆ ಹರಿದಾಡದೆ ಆತ್ಮ ವಿಮರ್ಶನ ಮಾಡುವಿಕೆ.

2. ಸಜ್ಜನರ ಸಂಗತಿ ಮಾಡುವಿಕೆ (ಸತ್ಸಂಗ).

3. ಯೋಗ್ಯತಾನುಸಾರ ಸಕಲ ಪ್ರಾಣಿಗಳಲ್ಲಿ ದಯೆತೋರುವಿಕೆ.

4. ಸ್ವಸಮಾನರಲ್ಲಿ ಯಥಾ ಯೋಗ್ಯ ಮಿತ್ರತೆ.

5. ಸ್ವೋತ್ತಮರಾದ ಸಜ್ಜನರಲ್ಲಿ ಯಥಾಯೋಗ್ಯ ಭಕ್ತಿ ಮಾಡುವಿಕೆ.

6. (ಶೌಚ) ಶುದ್ಧತೆ ಪವಿತ್ರತೆ ನಿಷ್ಕಾಮಕರ್ಮ.

7. ನಿಷಿದ್ಧಕರ್ಮಗಳಲ್ಲಿ ಮನವನ್ನು ಇಡದಿರುವಿಕೆ.

8. ಸಹನ ಶೀಲತೆ.

9. ಸಕಲ ಶಬ್ದಗಳು ಭಗವದ್ವಾಚಕಗಳೆಂದು ತಿಳಿದು ಅನ್ಯಥಾ ಅವನ್ನು ಬಳಸದಿರುವಿಕೆ.

10. ಸರ್ವಶಬ್ದವಾಚ್ಯನು ಪರಮಾತ್ಮನೇ ಎಂದು ಅಧ್ಯಯನದಿಂದ ತಿಳಿದು ಅದನ್ನು ಜನರಿಗೆ ತಿಳಿಸುವಿಕೆ.

11. ಕಾಯಾವಾಚಾ ಮನಸಾ ಒಂದೇ ರೀತಿಯಾಗಿರುವಿಕೆ.

12. ಮನಸ್ಸು ವಾಕ್ಕು ಕಣ್ಣು ಕಿವಿ ಕೈ ಮತ್ತು ಉಳಿದ ಅವಯವಗಳೆಂಬ ಆರು ಅಂಗಗಳನ್ನು ಪರಮಾತ್ಮನಲ್ಲಿಯೇ ಆಸಕ್ತನನ್ನಾಗಿ ಮಾಡುವಿಕೆ.

13. ಕಾಮಕ್ರೋಧಾದಿಗಳು ತನ್ನನ್ನು ಹಿಂಸಿಸದಂತೆ ಮಾಡುವಿಕೆ.

14. ಮೋಕ್ಷ ಪ್ರತಿಬಂಧಕ ಸುಖ ದುಃಖಗಳನ್ನು ಬಿಡುವಿಕೆ.

15. ಶರೀರದ ಹೊರಗಿರುವ ದೇವರನ್ನು ಚೆನ್ನಾಗಿ ತಿಳಿದುಕೊಂಡು ಮನದಲ್ಲಿ ಸ್ಥಿರ ಮಾಡಿಕೊಳ್ಳುವ ಪ್ರಯತ್ನ.

16. ಏಕಾಗ್ರತೆಯಿಂದ ಮಾಡುವ ಧ್ಯಾನ.

17. ಒಂದೇ ಸ್ಥಳದಲ್ಲಿ ಸ್ಥಿರವಾಗದಿರುವಿಕೆ ಮತ್ತು ಪರಮಾತ್ಮನೇ ಮುಖ್ಯ ಆಶ್ರಯನೆಂದು ತಿಳಿದು ಕೊಳ್ಳುವಿಕೆ.

18. ಸ್ವದೇಹಾಭಿಮಾನವನ್ನು ಬಿಟ್ಟು ಸಾಧನೆಗಾಗಿ ಶರೀರದಲ್ಲಿರುವಿಕೆ.

19. ಹೊಸಬಟ್ಟೆ, ಮತ್ತು ಹೊಸಶರೀರವನ್ನು ಬಯಸದೆ ಇದ್ದದ್ದರಲ್ಲೇ ಸಾಧನೆ ಮಾಡುವಿಕೆ.

20. ತನ್ನ ಸಾಧನೆಗೆ ಭಂಗಬಾರದೆ ಇರುವ ವೃತ್ತಿಯನ್ನು ಸ್ವೀಕರಿಸಿ ಸಂತೋಷದಿಂದಿರುವಿಕೆ.

21. ಭಾಗವತ ಗ್ರಂಥವೇ ಪರಮ ಶ್ರೇಷ್ಠವೆಂದು ತಿಳಿದು ವಿಶ್ವಾಸ ಪೂರ್ವಕವಾಗಿ ಅಲ್ಲಿ ಹೇಳಿದ ಧರ್ಮಗಳನ್ನು ಆಚರಿಸುವುದು.

22. ಭಾಗವತವಲ್ಲದ ಶಾಸ್ತ್ರದ ನಿಂದೆ (ಮಿಥ್ಯಾಜ್ಞಾನ ಖಂಡನೆ).

23. ಮನಸ್ಸನ್ನು ಮಾತುಗಳನ್ನು ಮತ್ತು ಶರೀರವನ್ನು ಪರೋಪಕಾರಕ್ಕಾಗಿ ಮೀಸಲಾಗಿಡುವಿಕೆ.

24. ಯತಾರ್ಥಧ್ಯಾನ (ಸತ್ಯ).

25. ಬುದ್ಧಿ ಪೂರ್ವಕ ಭಗವನ್ನಿಷ್ಠೆ (ಶ್ರಮ).

26. ಬುದ್ಧಿಪೂರ್ವಕವಾಗಿ ಇಂದ್ರಿಯ ನಿಗ್ರಹ (ಕಾಮ)

27. ಸ್ವಚ್ಛಾಸ್ತ್ರಗಳನ್ನು ಕೇಳುವಿಕೆ (ಶ್ರವಣ).

28. ಭಗವಂತನ ಗುಣಗಳನ್ನು ಮಹಿಮೆಗಳನ್ನು ಯಾವಾಗಲೂ ಹೇಳುವುದು. (ಕೀರ್ತನೆ).

29. ಅದ್ಭುತ ಕರ್ತನಾದ ಭಗವಂತನ ಅವತಾರ ಕರ್ಮಗಳು ಗುಣಗಳು ಮತ್ತು ಜಗತ್ತಿಗಾಗಿ ಮಾಡುವ ಅಖಿಲ ಕ್ರಿಯೆಗಳನ್ನು ಧ್ಯಾನ ಮಾಡುವುದು (ಧ್ಯಾನ).

30. ಮಾಡಿದ ಯಜ್ಞ ದಾನ ತಪಸ್ಸು ಜಪ ಸ್ನಾನಾದಿಗಳನ್ನು ಹಾಗೇ ತನಗೆ ಪ್ರಿಯರಾದ ಮನಃಪ್ರಾಣ ಮೊದಲಾದವುಗಳನ್ನೆಲ್ಲಾ ಹೆಂಡತಿ ಮಕ್ಕಳು ಮೊದಲಾದವುಗಳನ್ನೆಲ್ಲಾ ಶ್ರೀಹರಿಗೆ ಕೃಷ್ಣಾರ್ಪಣವೆಂದು ಸಮರ್ಪಿಸುವುದು. (ಆತ್ಮ ಸಮರ್ಪಣೆ). ಕೃಷ್ಣಾರ್ಪಣ

॥ ಶ್ರೀ ಲಕ್ಷ್ಮೀ ವೆಂಕಟೇಶಾಯನಮಃ ॥

## ಶ್ರೀ ಸುತ ತ್ತ್ವಗಳು ( ರಾಗ : ಷಣ್ಮುಖಪ್ರಿಯ )

ಪ: ಸಂಸಾರದಿಂದ ಜನಿಸುವ ಸುಖವು। ಕಂಸಾರಿ ಇಚ್ಛದಿ ಕೇವಲ ಕ್ಷಣಿಕವು।
ಕ್ಲೇಶದೆ ಬಹಳ ಅಡಗಿದೆ ಅದರ್ಹಿಂದೆ। ಜನನ ಮರಣ ಬಂಧನ ಬಹಳುಂಟು.

1. ಸಂಸಾರದಲ್ಲಿ ಅತಿ ಮೋಹ ಬಿಟ್ಟು, ಶಿಂಶುಮಾರಮೂರ್ತಿಯ ಪಾದವ ನಂಬಿ. ಜನ್ಮ ಜನ್ಮಾಂತರದ ಕರ್ಮಭೋಗಗಳ, ಕ್ರಮದಿ ಕಳೆದುಕೊಂಡು ಸಾಧಿಸು ಮನುಜ.

2. ಸತ್ವ ರಜ ತಮವೆಂಬ ಮೂರು ವಿಧ ಗುಣದಿ : ಅನಿತ್ಯವಾದ ಸೂಲದೇಹ ಕೂಡಿರುವುದು.
ಈ ಶರೀರದ ಇಪ್ಪತ್ನಾಲ್ಕು ತತ್ವಗಳು। ಜನಿಸುವವು ತ್ರಿಗುಣ ವೈಷಮ್ಯದಿಂದ.

3. ಪ್ರಾರಬ್ಧ ಅವಿದ್ಯ ಕಾಮುಲಿಂಗ ಜೀವಚ್ಛಾದ। ಪರಮೋಚ್ಛಾದ ಭಗವದಿಚ್ಛವೆಂಬಾವರಣ।
ಅಂಟಿಕೊಂಡಿರುವದು ಈ ನಮ್ಮ ಜೀವಕ್ಕೆ। ಪಂಚಭೂತ ಶರೀರನೆಂಬಾ ಲಯಕಾಶ್ರಯ।

4. ತ್ವಕ್ಕುಚರ್ಮ ಮಾಂಸ ರಕ್ತಮೇದಸ್ಸುಮಜ್ಜಿ। ಅಸ್ತಿ ಎಂಬ ಸಪ್ತಧಾತುವುಂಟು ಶರೀರಕ್ಕೆ
ಜಾಗೃತ ಸ್ವಪ್ನ ಚಷುಪ್ತನವಸ್ತ್ರತ್ರಯ। ಪ್ರಾಪ್ತವಾಗುವದು ಈ ಸ್ತೂಲಶರೀರಕ್ಕೆ

5. ನವದ್ವಾರಗಳೆಂಬ ಕಿವಿ ಮೂಗು ಬಾಯಿ। ಗುದವುಪಸ್ತವೆಂದು ನವ ಛಿದ್ರಗಳುಂಟು।
ನೂರು ವರ್ಷ ಆಯು ಇರುವದೀಶರೀರಕ್ಕೆ। ಸಾಧನ ಶರೀರದಿಂ ಸಾಧಿಸು ಮನವೇ ॥

6. ಸಂಚಿತಾಗಾಮಿ ಪ್ರಾರಬ್ಧ ಕರ್ಮತ್ರಯ ಮುಂಚಿತ್ಥವಾಗಿ ಸೃಷ್ಟಿ ಕಾಲದಿಂದೆ।
ಅಂಟಿಕೊಂಡಿರುವದು ಈ ಸ್ತೂಲದೇಹಕ್ಕೆ। ಅನುಭವಿಸಲೇಬೇಕು ಭಗವದಾಜ್ಞದಿ ॥

7. ಆದಿಭೌತಿಕ ಆಧ್ಯಾತ್ಮಿಕ। ಆದಿ ದೈವಿಕ ಎಂಬ ತಾಪಗಳುಂಟು।
ಆದಿ ನಾರಾಯಣನ ದಯದಿ ಗೆಲ್ಲಬೇಕು। ರೋಗರುಜಿನ ಮನಕ್ಲೇಶ ಆಪತ್ತುಗಳು ॥

8. ವಿಶ್ವಪ್ರಾಜ್ಞತೈಜಸತುರ್ಯನಾಮಕನು। ಆದಾಸ್ತತ್ರಯವುಂಟು ಮಾಡುವ ದೇಹಕ್ಕೆ।
ಆತ್ಮ ಅಂತರಾತ್ಮ ಜ್ಞಾನಾತ್ಮವೆಂಬ ರೂಪ. ತ್ರಯಗಳಿಂದ ಬಿಂಬನಾಗಿರುವ ದೇಹದಿ ॥

9. ಜ್ಞಾನಪ್ರದನು ಸಚ್ಚಿದಾನಂದನು। ಜ್ಞಾನಾತ್ಮಕನಾದ ಬಿಂಬರೂಪಿ ಶ್ರೀಹರಿ।
ಏಳುರೂಪಿ ಹರಿಯ ಕಾಣದ ಭವಕೆ। ಸಿಲುಕೆ ಭವಣೆ ಬಟ್ಟೆ ಬಿಂಬ ಮಾರುತಿಯೇ ॥

10. ಅನಾದಿಕಾಲದ ತ್ರಿಗುಣಾತ್ಮಕವಾದ। ಹದಿನಾರು ಕಳತ್ಮಕಲಿಂಗ ದೇಹವು।
ಸುತ್ತುಕಟ್ಟಿರುವುದು ಸ್ವರೂಪಜವರನ। ಅಂಗಗೂಡಿನಿಂದ ತಪ್ಪಿಸಿ ಪೊರೆ ಹರಿಯೇ ॥

11. ಪಂಚಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ। ಪಂಚತನ್ಮಾತ್ರ ಪಂಚಭೂತಗಳು।
ಮನಸು ಸಹಿತ ಹದಿನಾರು ಕಳೆಗಳ ಲಿಂಗ ದೇಹ। ಕಳಚಿ ಸಾಧಿಸು ಶ್ರೀಹರಿಯ ನಂಬಿ ॥

12. ಕಾಮ ಕ್ರೋಧ ಲೋಭ ಮೋಮದಮಾಶ್ಚರ್ಯ। ಆರು ಶತೃಗಳು ಅನುಗಾಲಕಾವು।
ಹರಿಶ್ರವಣಕೀರ್ತನ ಸ್ಮರಣಪಾದಸೇವನ। ನವವಿಧಭಕ್ತಿಯಿಂದ ಮುಕ್ತಿಪಡೆ ಮನುಜ।

13. ಸತ್ಸಾಧನೆಗೆ ಆಶಲಜ್ಜಗಳು। ಅಷ್ಟ ಬರುವುದು ಸವತಿಯರಂತೆ।
ಮಾಯಾ। ದೇವಿಯ ಅನುಗ್ರಹ ಪಡೆದರೆ। ಅಂಗ ತಪ್ಪಿಸಿ ಪೊರೆವ ವಾಸುದೇವನು ॥

14. ಭಾರತಿಭಾರತರು ಅಂತಃಕರಣ ಶುದ್ಧವಾದ। ಹರಿಭಕುತಿಕೊಟ್ಟು ಅನುಗ್ರಹಿಸಿದರೆ।
ಸಂಶಯವಿಪರ್ಯಕೊಡದೆ ಕಾಪಾಡಿದರೇ। ಜ್ಞಾನಭಕ್ತಿ ವೈರಾಗ್ಯದೊರೆವದೆಂಬಾಶೆ ॥

15. ದುಸ್ಸಂಗದಿ ಬೆಂದು ಬೆಂಡಾದೆನೊ। ಸತ್ಸಂಗವನು ಕೊಟ್ಟು ಕಾಪಾಡು ತಂದೆ।
ದೇವ ಋಣ ಋಷಿ ಋಣ ಪಿತೃ ಋಣ ತೀರಿಸಿ। ಹರಿಭಕ್ತರಲ್ಲಿ ಸೇರಿಸಿ ಕಾಯೋ ॥

16. ಮರಣ ಕಾಲದಿ ನಿನ್ನ ಸ್ಮರಣೆ ಕೊಡು ರಂಗಯ್ಯ। ಎನ್ನಿಷ್ಟ ದೈವ ಬಿಂಬರಾಮಚಂದ್ರ ಪ್ರಭೋ।
ನಿಷ್ಕಾಮ ಸ್ವಧರ್ಮ ಕೊಟ್ಟು ಕಾಪಾಡು। ಕಪಿಲನಾಮಕನೇ ಕೈಮುಗಿದು ಬೇಡುವೆ ॥ ಸಂಸಾರ ॥

## ॥ ರಾಮಧ್ಯಾನ ॥

1. ರಾಮರಾಮ ಮಂತ್ರ ರಾಮರಾತಂತ್ರ। ಶ್ರೀರಾಮರಾಮಯೆನ್ನಿರೋ।
ರಾಮನಾ ಕರುಣೆಗೆ ಪಾತ್ರರಾಗಿರಿ ಸುಜನ। ರಾಮಯೆಂದವರಿಗೆ ಏನು ಭಯವಿಲ್ಲ ॥

2. ಯಾರು ಮಾಡಿದ ಕರ್ಮ ಅವರೆ ಉಣ್ಣಲು ಬೇಕು। ಪರರ್‍ಯಾಕೆ ಉಣ್ಣುವರು ಮನುಜ।
ದುಷ್ಕರ್ಮ ಮಾಡದೆ ನಿಷ್ಕಾಮದಿಂದಲಿ। ಹರಿಯನ್ನು ಧ್ಯಾನಿಸು ಮನವೇ ॥

3. ಸತಿಸುತರು ಬಾಂಧವರು ಹಿತವರೆಲ್ಲರು ಮುಖ್ಯರೆಂದು ಅತಿಶಯದಿ ಮೋಹ ಪಡಬೇಡ।
ಅನಿಮಿತ್ತಬಂಧುವು ಆ ಮಹಾ ವಿಷ್ಣುವಿನ। ನೆನೆದು ಧನ್ಯನಾಗು ಮನವೇ ॥

4. ಸಾಧನ ಶರೀರ ವಿದು ನೀ ದಯದಿ ಕೊಟ್ಟಿದ್ದು. ಸಾಧಾರಣವಲ್ಲ ಹರಿಯೇ।
ಮೋಕ್ಷಮಾರ್ಗಕೆ ದಾರಿ ತೋರಿ ಕಾಪಾಡುವದು। ನಿಜಭಕುತಿ ನಿನ್ನಲ್ಲಿ ಕೊಡು ಎನಗೆ ದೊರೆಯೆ

5. ವಾಯುತುಂಬಿದ ಪಾತ್ರೆ ಆದ ಈ ದೇಹವನು। ನೆಚ್ಚಿ ಕೆಡಲೂ ಬೇಡ ಮನವೇ।
ಅಚ್ಚುತನವೆಂಬುತ ತುಚ್ಚಮಾರ್ಗವ ಬಿಟ್ಟು। ಧರ್ಮದಿಕಾಲಕಳೆ ಮನವೇ ॥

6. ಹಗಲೂ ಇರಳೂ ಕಳೆದ ರಾಯುಷ್ಯ ಕ್ಷೀಣಿಪದು। ದೇಹ ನಂಬಿ ಕೆಡಲು ಬೇಡ।
ಜೀವ ಜೀವಕೆ ಭೇದ ದೇಹ ಬಾಂಧವರೆಲ್ಲ। ಅನಿಮಿತ್ತಬಂಧು ಶ್ರೀಹರಿಯನ್ನು ಸ್ಮರಿಸು।

7. ರಾಮಧ್ಯಾನದಿ ಶಾಂತಿ ದೊರುಕುವದೆಂಬ। ಮರ್ಮವ ತಿಳಿದುಕೋ ಮನವೇ।
ಮಹಮಹಾಭಕ್ತರು ಮಾರುತನ ಕರುಣದಿಂ। ಪೋದರು ಹರಿಯ ನಿಜ ಮಂದಿರಕ್ಕೆ ॥

8. ಕ್ಷರಾಕ್ಷರಕೆ ಉತ್ತಮ ಪುರುಷನಾದ। ಶ್ರೀಮನ್ನಾರಾಯಣಾ।
ಅನನ್ಯ ಭಕ್ತಿಯಿಂ ಮಾತ್ರದಿ ಲಭ್ಯನು। ಅನುಪಮಾಮೂರ್ತಿ ಶ್ರೀರಾಮಚಂದ್ರ ॥

9. ಅನಾದಿಕಾಲದಿಂ ಅನಂತಕಾಲದಿ ಅಪೌರುಷೇಯ ವಾದವೇದಗಳು।
ವ್ಯತ್ಯಾಸವಿಲ್ಲದೆ ಶಬ್ದಾರ್ಥವೆಲ್ಲ ಹರಿದು ಬರುವದು ಹರಿಬುದ್ಧಿಯಲಿ ॥

10. ವೇದಸ್ವರೂಪನು ವೇದಾದಿವೇದ್ಯನು। ಸಚ್ಚಿದಾನಂದನು ಸತ್ಯಸಂಕಲ್ಪನು।
ಗುಣಪರಿಪೂರ್ಣನುಜಗದೇಕ ವಂದ್ಯನು। ಆ ಕಮಲನಾಭನೊಬ್ಬನೇ ॥

11. ಕಪಿಲ ನಾಮಕ ಪರಮಾತ್ಮನ ಧ್ಯಾನದಿ। ದೊರೆಯುವದಾನಂದ ಸಂಭ್ರಮ ಈ ಜೀವಕೇ।
ಇಂತಹ ಶ್ರೀಹರಿಗೆ ಸಾಟಿ ಯಾರಿಲ್ಲ। ಹಿಂದೆ ಮುಂದೆ ಎಂದೆಂದಿಗೂ ॥
ರಾಮರಾಮ ಮಂತ್ರ ರಾಮರಾಮತಂತ್ರ ಶ್ರೀರಾಮರಾಮಯನ್ನಿರೀ ॥

## ಶ್ರೀ ಪರಮಾತ್ಮನ ಸರ್ವಾಂಗ ಧ್ಯಾನ : ರಾಗ: ಮೋಹನ

1. ಶ್ರೀಮನ್ನರಾಯಣನೇ ನಿನ್ನ ಪಾದ ಧ್ಯಾನವ ಮಾಡುವೆನು।
ನಿನ್ನ ಸರ್ವಾಂಗ ಅವಯುವಗಳಿಗೇ। ಅನಂತಾನಂತ ನಮಸ್ಕಾರ ಸಮರ್ಪಿಸುವೇ।

2. ಅಂಕುಶ ಪದ್ಮಧ್ವಜಗರುಡರೇ ಇರುವ ನಿನ್ನಾ ಚರಣಕೆಳಿ।
ನಸುಕೆಂಪಾದ ಕಮಲದಂತೆ ಹೊಳೆವ। ಪಾದದ್ವಯಗಳಿಗೆ ಅನಂತ ನಮಸ್ಕಾರ ॥

3. ದುಷ್ಟ ಶಿಕ್ಷಕ ಶಿಷ್ಠ ರಕ್ಷಕ ನಿನ್ನ। ದಿವ್ಯಜಾನು ಜಂಘಕ್ಕೆ।
ಗರುಡಾರೂಢನಾಗಿ ದೃವರಾಜನುದ್ಧರಿಸಿದ। ಉರುಗಳಿಗೆ ಅನಂತಾನಂತ ನಮಸ್ಕಾರ ॥

4. ಬ್ರಹ್ಮಾಂಡ ಧರಿಸಿದ ಉದರಕ್ಕೆ। ಬ್ರಹ್ಮನ ಪಡೆದ ನಾಭಿಗೆ ನಮಸ್ಕಾರ।
ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ। ರೂಪದಿ ಸೃಷ್ಟಿ ಸ್ಥಿತಿ ಲಯವನ್ನು ಮಾಡಿದೆ ॥

5. ಉಡುದಾರ ಉಡುಗೆಜ್ಜೆ। ಮಣಿ ಮಂಜರ ವಡ್ಯಾಣ ಧರಿಸಿದ ಕಟಿಗೇ।
ಚಂದ್ರನಂತೆ ಪ್ರಕಾಶವಾದ ನಿನ್ನ ಹೃದಯಕ್ಕೆ ಅನಂತ ನಮಸ್ಕಾರ ॥

6. ನಿನ್ನ ವಕ್ಷಸ್ಥಳದಿ ನಿತ್ಯಾ। ಮುಕ್ತಳು ನಿರ್ವಿಕಾರಳು ಅಕ್ಷರಳು।
ತ್ರಿಗುಣಾಭಿಮಾನಿ ಪ್ರಕೃತಿ ವೇದಾಭಿಮಾನಿ। ಜಗಜ್ಜನನಿ ಲಕ್ಷ್ಮೀಪತಿಗೆ ನಮಸ್ಕಾರ ॥

7. ವನಮಾಲ ವೈಜಯಂತಿ। ಕೌಸ್ತುಭಮಣಿ ಧರಿಸಿ ಶಂಖದಂತೆ।
ಶೋಭಿಸುವ ದಿವ್ಯ ಕಂಠಕ್ಕೆ ನಮಸ್ಕಾರ। ಮುಕ್ತಜೀವರು ನಿನ್ನ ಸ್ತುತಿಪರು ॥

8. ಪುರುಷಾರ್ಥ ಲಕ್ಷಣವಾದ। ಧರ್ಮಾರ್ಥ ಕಾಮಮೋಕ್ಷ ಸಂಕೇತವಾದ।
ಶಂಖ ಚಕ್ರ ಗದಾ ಪದ್ಮ ಪಿಡಿದ ನಿನ್ನ ಚತುರ್ಭುಜಕೇ। ಅನಂತಾನಂತ ನಮಸ್ಕಾರ।

9. ಸೂರ್ಯ ಕೋಟಿ ಪ್ರಕಾಶ। ಅಗ್ನಿಯಂತೆ ಶೋಭಾಯಮಾನವಾದ।
ಭೃಗುಋಷಿಗಳಿಂದ ಬ್ರಾಹ್ಮಣ ವರ್ಣವಿರುವ ನಿನ್ನ। ಮುಖಾರವಿಂದಕ್ಕೆ ಅನಂತ ನಮಸ್ಕಾರ ॥

10. ದಾಳಿಂಬೆಬೀಜದಂತೆ ಹೊಳೆವ ನಿನ್ನ ದಂತಪಂಕ್ತಿಗಳಿಗೆ। ಬುದ್ಧಿಯಿಂದರಿಯುವ ವೇದ ಪಂಕ್ತಿಗಳಿಗೆ। ಅನಂತಾನಂತ ನಮಸ್ಕಾರ ಸಮರ್ಪಿಸುವೆ ॥

11. ಮೃದು ಮಂದಹಾಸ ತೋರುವ। ನಿನ್ನ ಅಧರಗಳಿಗೆ ನಮಸ್ಕಾರ।
ಮುಖ್ಯ ಪ್ರಾಣನಿಂದೆ ಸರ್ವಜೀವರಲ್ಲಿ ಹಂಸಮಂತ್ರ। ಜಪ ಮಾಡಿಸುವ ನಿನ್ನ ನಾಸಿಕಗೆ ನಮಸ್ಕಾರ ॥

12. ಸದ್ಭಕ್ತರನು ಕರುಣೆದಯಾ ಪ್ರೀತಿ ವಾತ್ಸಲ್ಯದಿಂ ವೀಕ್ಷಿಸುವ।
ಕಮಲದಂತೆ ಇರುವ ನಿನ್ನ ನಯನಗಳಿಗೆ ಆನಂದ। ಅಸಂಖ್ಯ ಅನಂತ ನಮಸ್ಕಾರ ॥

13. ರುದ್ರಸ್ಥಾನ ನಿನ್ನಾಲಲಾಟವು। ಶಿರವು ಬ್ರಹ್ಮನ ಸ್ಥಾನವು।
ಅಹೋರಾತ್ರಿಗಳ ಸಂಕೇತ ಕಣ್ಣು ರೆಪ್ಪೆಗಳು। ಯಮನ ಸಂಕೇತವಾದ ಹುಬ್ಬಿಗೆ
ನಮಸ್ಕಾರ ॥

14. ಸರ್ವಾಂಗ ಭೂಷಿತವಾದ। ಕಿರೀಟ ಧರಿಸಿದ। ನಿನ್ನಾಶಿರಕೆ ವಂದನೆ।
ಆನಂದಮಯವಾದ ನಿನ್ನ ಅವಯವಗಳಿಗೆ। ಅನಂತಾನಂತ ನಮಸ್ಕಾರ
ಅರ್ಪಿಸುವೆ ॥

15. ಶಿರಸಿಂದೆ ನಖಪರಿಯಂತ ಆನಂದಮಯ। ನಿನ್ನ ಸರ್ವಾಂಗ ಧ್ಯಾನವು।
ಮಾಡಿದ ಸುಜನರ ಪೊರೆದ ಕಪಿಲಾಖ್ಯನು। ಸರ್ವಸಮರ್ಪಣೆ ಮಾಡಿ ಮುಕ್ತರಾಗಿ
ಸುಜನ ॥

## ಭಕ್ತಿಯೋಗ ಮೋಹನರಾಗ ॥

1. ಸೂಕ್ಷ್ಮಾತಿ ಸೂಕ್ಷ್ಮ ಉಳ್ಳದು ಈ ನಮ್ಮ ದೇಹ। ಮುಳ್ಳುಕೊನೆಯಷ್ಟು ಪ್ರಮಾಣ ॥
ಸ್ವರೂಪ ಲಿಂಗ ಅನಿರುದ್ಧ ಸ್ಥೂಲದೇಹ। ಅಂಟಿಕೊಂಡಿರುವದು ಈ ನಮ್ಮ
ಜೀವಕ್ಕೆ

2. ಹರಿಪರನೆಂಬ ಜ್ಞಾನವು। ತಿಳಿಯಲು ನರಜನ್ಮ ಬಂದಾಗ ಸಾಧ್ಯ।
ಹುಟ್ಟುಸಾವಿನ ಆಟ ಮುಪ್ಪುಬೇನೆಯ ಕಾಟ। ತಪ್ಪಿಸಿಕೊಳ್ಳಲು ಶುದ್ಧಾಂತಃಕರಣ
ಭಕ್ತಿ ॥

3. ಶಾಸ್ತ್ರಾವಿಧಿಯ ತೊರೆದು ನಿತಿಗೆಟ್ಟು। ಕಾರ್ಯ ಅಕಾರ್ಯ ತಿಳಿಯದೇ।
ಕಾಮಾ ಕ್ರೋಧ ಲೋಭ ಮೋಹದಿ ಕೆಡದೇ। ಶಾಸ್ತ್ರಪ್ರಮಾಣ ದಾರಿದೀಪ
ವೆಂದರಿಮನುಜ ॥

4. ಸ್ಥೂಲಾದೇಹದಿಂದೆ ಹರಿಭಕ್ತಿ ಸಾಧನೆ। ಸುಲಭದಿ ಸತ್ಕಾರ್ಯವ।
ಆಚರಿಸಿದರೂ ಬಾಲ್ಯಯಾವ್ವನ ಮುಪ್ಪು. ಅಡ್ಡಬರುವದು ಹರಿಭಕ್ತಿಸಾಧನೆಗೇ ॥

5. ಜ್ಞಾನಶಕ್ತಿಯಿಲ್ಲದೆ ಅವಸ್ತತ್ರಯಗಳಿಂದೇ ಸರಳುತ್ತ ಜೀವ।
ಭೋಗದಾಸೆಗೆ ಸಿಲುಕಿ ಯೌವ್ವನದಲ್ಲೂ ಸಹ। ಬಾಳನ್ನು ವ್ಯರ್ಥಮಾಡಿಕೊಳ್ಳದೆ ಇರಬೇಕು

6. ನರಜನ್ಮ ಬಂದಾಗಲೇ ಅಪರೋಕ್ಷಜ್ಞಾನಿ। ಹರಿಪರನೆಂದು ನಂಬುವರು ॥
ಸತ್ಸಾಧನೆಸತ್ಧರ್ಮಕುಂಠಿತವಾಗದಾಂಗೆ। ಧರ್ಮಕಾರ್ಯಕ್ಕೆ ವಿತ್ತ ಉಪಯೋಗಿಸಬೇಕು ॥

7. ಪತ್ನಿಪುತ್ರರಿಂದೇ ಧರ್ಮದ ಕಾರ್ಯಧಾರಾಳವಾಗಿ ನಡೆಯೊಲ್ಲಾ ॥
ಸದ್ಬುದ್ಧಿ ಬಂದಾಗ ಸತ್ಪಾತ್ರ ದೊರೆತಾಗ। ಸದ್ವಿನಿಯೋಗವಾದ ಧನ ಬಲು

8. ಕೃಪಣತನದಿ ಅಧರ್ಮ ಮಾಡುತ್ತ ಕಪಟತನದಿ ವಂಚಿಸುತ್ತ ॥
ತಾನು ಭೋಗಿಸದೆ ಪರರಿಗೆ ಕೊಡದೆ। ಇರಬೇಡ ಮನುಜ ಸತ್ಕರ್ಮವಾಚರಿಸು ॥

9. ಸಂಚಿತಗಾಮಿ ಪ್ರಾರಬ್ಧವೆಂಬ ಕರ್ಮತ್ರಯವುಂಟು ಈ ಜೀವಕ್ಕೆ ॥
ಹಿಂದುಮುಂದಿನ ಜನ್ಮದ ಅರಿವು ನಮಗಿಲ್ಲ। ಪ್ರಾರಬ್ಧವರ್ತಮಾನ ಕಾಲದಿ ತಿಳಿಯಬೇಕು.

10. ಪ್ರತ್ಯೇಕ್ಷ ಆಗಮ ಅನುಮಾನದಿಂದೇ। ಮೋಕ್ಷಸಾಧನೆ ಮಾಡಬಹುದು।
ಸತ್ವ, ರಜತಮಯಂಬ ಗುಣತ್ರಯಗಳು। ಭವಣೆ ಬಡಿಸುವ ದುಸಾಧನೆ ಮಾಡಧಾಗೆ।

11. ತಮೋರಜಗುಣದಿಂದೇ ಜ್ಞಾನ ಕರ್ಮ ನಡೆಯೊಲ್ಲಸಾಧನೆಗೇ।
ಸತ್ವಗುಣದಿಂದೆ ಸಾಧ್ಯ ಸಾಧನೆ ಮಾಡಲು। ಆದರೂಸಹ ಸದ್ವಿನಿಯೋಗ ನಡೆಯದು

12. ಸರ್ವತಂತ್ರ ಸ್ವತಂತ್ರನಾದ ಶ್ರೀ ವಿಷ್ಣುಸರುಪ್ರೋತ್ತಮನು।
ಅಸ್ವತಂತ್ರ ಪರಾಧೀನರಾದ ಬ್ರಹ್ಮರುದ್ರರು। ಮೋಕ್ಷಕೊಡಲು ಅಧಿಕಾರವಿಲ್ಲವರಿಗೆ ॥

13. ಅಧಿಕಾರ ಉಳ್ಳವನಾದಾಗ್ಯೂ। ಶ್ರೀಮಹಾವಿಷ್ಣು ನಮ್ಮ ಕರ್ಮದ ಫಲದಿ। ಜ್ಞಾನವೈರಾಗ್ಯ ಹುಟ್ಟಲಿಲ್ಲ ಜೀವಕ್ಕೆ. ನಿರ್ಮಲ ಭಕ್ತಿಯಿಂದೆ ಸಾಧನೆ ಮಾಡಬೇಕು.

14. ಸಂಚಿತಗಾಮಿ ಪ್ರಾರಬ್ಧ ಕರ್ಮತ್ರಯ। ಕಾಡುವದು ಜೀವನ।
ವರ್ತಮಾನದಲ್ಲಿ ಸತ್ಕಾರ್ಯಗಳ ಆಚರಿಸಿ।
ಮುಕ್ತಿಯನ್ನು ಪಡೆಯಲು ಸತ್ಸಾಧನೆ ಮಾಡು ಮನುಜ ॥

15. ರಾಜಸ ತಾಮಸ ಭಕ್ತಿಯು ಉಪಯೋಗವಿಲ್ಲ। ಸಾತ್ವಿಕ ಭಕ್ತಿಶ್ರೇಷ್ಠ। ನಿರ್ಮಲ ಮನಸಿನಿಂದೆ ಮಾಡಿದ ಭಕ್ತಿ ಶ್ರೇಷ್ಠ। ಕಾಯವಾಚದ ಭಕ್ತಿ ನಶಿಸಿ ಹೋಗುವದು।

16. ಹಿಂದಿನ ಜನ್ಮದ ಅರಿವು ಇರೊಲ್ಲ ಮುಂದಿನ ಜನ್ಮದು ಲಕ್ಷವಿರೊಲ್ಲ ॥ ಎರಡರಿಂದೆ ಜ್ಞಾನ ಜಾಗ್ರತವಾಗಲಿಲ್ಲ। ವರ್ತಮಾನ ಜನ್ಮದ್ದುಮನಸಿಗೆ ಹತ್ತಬಹುದು

17. ಕಾಲ ವ್ಯರ್ಥವಾಗದ ಮುನ್ನ। ಜಾಗೃತರಾಗಿ ಪರಮಾತ್ಮನ ಪ್ರಸಾದಕ್ಕೆ। ಪಾತ್ರರಾಗಿ ಸದ್ಗತಿ ನೀಡೆಂದು ಪ್ರಾರ್ಥಿಸಿ। ಕಪಿಲಾಖ್ಯ ಸ್ವಾಮಿಯ ಅನುಗ್ರಹ ಪಡೆ ಮನುಜ।

## ॥ ಜಡಭರತನ, ಹಾಡು ॥

॥ ಪ ॥ ಇರಬೇಕು ಜಡ ಭರತನಂತಿರಬೇಕು। ಪೊಡವಿದವಗೆ ಜಡಭರತನಂತಿರಬೇಕು ॥

1. ಸಂಸಾರದಲ್ಲಿ ಇದ್ದು ಇರದೆ ಪದ್ಮಪತ್ರದಂತೆ ಅಂಟಿ ಅಂಟದೆ। ಅರಿಷಡ್ವರ್ಗವು ಆದಷ್ಟು ಜಯಿಸಿ।
ಜಡಭರತನಂತೆ ಇರಬೇಕು ಮನುಜ ॥

2. ದಾರಾಪುತ್ರಮಿತ್ರ ಬಾಂಧವರೆಲ್ಲ। ಸ್ವರೂಪ ದೇಹಕೆ ಸಂಬಂಧವಿಲ್ಲ।
ದೇಹ ಬಾಂಧವರ ನೆಚ್ಚಿಸಿ ಕೆಡಬೇಡ। ಅಚ್ಚುತನ ನಂಬಿ ತುಚ್ಛ ಮಾರ್ಗಬಿಡು ಮನುಜ ॥

3. ಬ್ರಹ್ಮಜ್ಞಾನವ ಪಡೆಯಲು ರಾಜನೊಬ್ಬ. ಸಮ್ಮತದಿಂದೆ ಪೋಗುವಮಾರ್ಗದಿ
ಜಡಭರತನ ಕಂಡು ಉಪದೇಶ ಪಡೆದು। ಹಿಂತಿರುಗಿದನಂತೆ ತನ್ನ ಸ್ವಸ್ಥಳಕೇ ॥

4. ಎಲ್ಲಾ ಪ್ರಾಣಿಗಳ ಭಾರ ಹೊರೆವ ಲಕ್ಷ್ಮೀಪತಿ। ಉಲ್ಲಾಸದಿ ಹನುಮ ಶೇಷರಕೂಡಿ।
ಅಜ್ಞಾನ ಅವಿದ್ಯಬಿಟ್ಟುಧ್ಯಾನಿಸಿರಿ। ಜ್ಞಾನ ಭಕ್ತಿ ವೈರಾಗ್ಯದಿ ಹರಿಯ ॥

5. ಹೆಣ್ಣು ಹೊನ್ನು ಮಣ್ಣು ಆಶಾ ಮೋಹತೊರೆದು। ಚಿನ್ಮಯ ಕೃಷ್ಣನ ಧ್ಯಾನಿಸುತಿರಲು।
ಕಾಳಿದೇವಿಗೆ ಬಲಿ ಕೊಡಲು ದುಷ್ಟರು। ಹತರಾದರು ಜಡಭರತನ ಶಕ್ತಿಯಿಂದೆ।

6. ಅತ್ತಿಗೆ ಕೊಟ್ಟ ಹಳಸಿದ ಅನ್ನದಿ। ಅತ್ಯಂತ ಭಕ್ತಿಲಿ ಪ್ರತಿ ಅಗಳಿನಲ್ಲಿ।
ಪರಮಾತ್ಮನ ರೂಪ ಕಂಡು ಆನಂದದಿ। ತನು ಮರೆತು ಕುಣಿದು ಉಣ್ಣುತಿದ್ದ ಜಡಭರತ ॥

7. ಶಮದಮಾದಿಯಂ ಕೂಡಿದವರಾಗಿ। ಭಾಗವತ ನಿದ್ದ ಜಡಭರತ ॥ ಸ್ವಧರ್ಮ ಅನುಸರಿಸುತಲಿ। ಕಪಿಲ ನಾಮಕ ಪರಮಾತ್ಮನ ನಂಬಿ।
ಮುಕ್ತರಾಗಿರಿ ಜಡಭರತನಂತೇ ॥ ಇರಬೇಕು ಜಡಭರತನಂತಿರಬೇಕು।

॥ ಪ ॥ ಕಾಯೋಶ್ರೀಹರಿ ಅನಿಮಿತ್ತಬಂದೋ।
ಅನಾಥ ಬಂದೋ ಪಾಂಡವ ಬಂಧೋ ॥

1. ಕೃತಯುಗದ ವರದರಾಜ। ತ್ರೇತಾಯುಗದ ಜಗನ್ನಾಥ
ದ್ವಾಪರ್ಯುಗದ ರಂಗನಾಥ। ಕಲಿಯುಗದ ವೆಂಕಟೇಶ
ಭರತ ಖಂಡಾಧಿಪ ಬದರಿನಾರಾಯಣ।
ಕಾಯೋ ಶ್ರೀಹರಿ ಮಮ ಸ್ವಾಮಿ ॥

2. ಅಷ್ಟಕರ್ತೃ ನಾರಾಯಣ। ಅಷ್ಟಲಕ್ಷ್ಮೀಪತಿ ನಾರಾಯಣ।
ತಂದೆ ತಾಯಿ ಬಂಧು ಬಳಗ। ನಾರಾಯಣ ॥
ದೋಷದೂರ ಗುಣಪರಿಪೂರ್ಣ। ದುರಿತ ದುಃಖನಿವಾರಣ
ಕಾಯೋ ಶ್ರೀಹರಿ ಅನಿಮಿತ್ತ ಬಂಧೋ ॥

3. ಎನ್ನಕಂದ ಶ್ರೀರಂಗಾ ಎನ್ನತಂದೆ ಪಾಂಡುರಂಗ।
ಎನ್ನತಾತ ತಲ್ಪಗಿರಿರಂಗ। ಮುತ್ತಾತ ಶ್ರೀಮುಕುಂದ ॥
ಹೆತ್ತಾತ ಹರಿನಾರಾಯಣ। ದಾರಿತೋರಿದಾತ
ದಾನವಾಂತಕಹರಿ ಮಮಸ್ವಾಮಿ ॥

4. ಎನ್ನ ಹಿರಿಯರ ಮನೆ ಕುಲದೈವ ಶ್ರೀವೆಂಕಟೇಶ ಪ್ರಭು।
ಎನ್ನಿಷ್ಟದೈವ ಬಿಂಬಮೂರ್ತಿ ಶ್ರೀರಾಮ ಚಂದ್ರಪ್ರಭು।
ಅಗ್ನಿ ಸೂರ್ಯಾಂತರ್ಗತ, ಶ್ರೀಮನ್ನಾರಾಯಣ
ಕಾಯೋ ಶ್ರೀಹರಿ ಅನಿಮಿತ್ತಬಂಧೂ ॥

5. ಎನ್ನತಾಯಿ ಶ್ರೀ ಮಹಾಲಕ್ಷ್ಮೀ ಶ್ರೀ ಭೂದುರ್ಗೇ।
ಮಾಯೆ ಜಯೆ ಶಾಂತಿ ಕೃತಿ ಶ್ರೀರಮಾದೇವಿಯೆ ॥
ಎನ್ನ ಹಿರಿಯರ ಮನೆ ಕುಲದೇವತೆ ಚಂದ್ರಲಾಂಬೆ ಸೀತಾಮಾತೆ।
ಕಾಯೇ ತಾಯೆ ಕರಮುಗಿದು ಬೇಡುವೆ ॥

6. ಸಿರಿದೇವಿ ಸಿರಿವಂತೆ। ಸೌಭಾಗ್ಯವಂತೆ,
ಅಕ್ಷರುಪುರುಷಳೆ, ಶ್ರೀ ಮಹಾಲಕುಮಿ ॥
ಪದ್ಮಾನಾಭ ಪ್ರಿಯಳೆ। ಪದ್ಮಲೋಚನೆಯೆ।
ಕೊಲ್ಹಾಪುರಿ ನಿಲಯೇ ತಾಯೇ ॥

ತೀರ್ಥಕ್ಷೇತ್ರ ಮಹಿಮಾ

7. ಹಿರಿಯಣ್ಣ ಬ್ರಹ್ಮದೇವ। ಕಿರಿಯಣ್ಣವಾಯುದೇವ।
ಹನುಮ ಭೀಮ ಮಧ್ವರು। ಲೋಕಮಾನ್ಯ ಗುರುಗಳು ॥
ಶ್ರೀಸರಸ್ವತಿ ಭಾರತಿಯರು। ಪೂಜ್ಯ ಅತ್ತುಗೆ ನಾದುನಿಯರು।
ಕಾಯೋ ಶ್ರೀಹರಿ ಅನಿಮಿತ್ತಬಂಧೋ ॥

8. ಗರುಡ ಶೇಷ ರುದ್ರರು, ಪರಮ ಭಾಗವತೋತ್ತಮರು।
ಷಣ್ಮಹಿಷಿಯರೆನ್ನ। ಪೂಜ್ಯಮಾತೆಯರು ॥
ಶ್ರೀತುಳಸಿದೇವಿ ಸೌಭಾಗ್ಯನೀಡುವಳು
ಕಾಯೋ ಶ್ರೀರಂಗ ಮಮ ಸ್ವಾಮಿ ॥

9. ಚಿಕ್ಕಮ್ಮ ಶ್ರೀ ತುಳಸಿ ಚೊಕ್ಕರಂಗನ ವರಸಿದಳು।
ಉತ್ಥಾನದ್ವಾದಶಿ ಶ್ರೀರಂಗನೊಡನೆ ಲಗ್ನವಾದಳು ॥
ಶ್ರೇಷ್ಠಳೆಂದೆನಿಸಿದಳು ಶ್ರೀ ಕೃಷ್ಣನ ಪೂಜೆಗೆ।
ಕಾಯೋ ಶ್ರೀಹರಿ ಅನಿಮಿತ್ತ ಬಂಧೂ ॥

10. ಸೌಪರ್ಣಿ ವಾರುಣಿ ಉಮ। ಇಂದ್ರಕಾಮ ಶಚಿ ರತಿಯೇರು
ಸಕಲ ದೇವತೆಗಳೆಲ್ಲ। ಪರಮಾತ್ಮನ ಪರಿವಾರ ॥
ಗಂಗಾಮಾತೆ ಗೋಮಾತೆ। ಗೋವಿಂದನ ಪರಿವಾರ।
ಕಾಯೋ ಶ್ರೀಹರಿ ಅನಿಮಿತ್ತ ಬಂಧೂ।

11. ಮಂಗಲ್ಯಾಭಿಮಾನಿ ಪಾರ್ವತಿ। ಮನೋನಿಯಾಮಕ ರುದ್ರದೇವ।
ಹಿರಿಯಭಗಿನಿ ಪೂಜ್ಯದ್ರೌಪತಿ। ತಾರಾ ಮಂಡೋದರಿ ॥
ಅಹಲ್ಯಾ ಪತಿವ್ರತೆಯರು। ಪ್ರಾತಃಸ್ಮರಣೀಯರು।
ಕಾಯೋ ಶ್ರೀ ಹರಿ ಅನಿಮಿತ್ತ ಬಂಧೂ ॥

12. ಯತಿವರೇಣ್ಯರು ಹರಿದಾಸರು। ಅಪರೋಕ್ಷ ಜ್ಞಾನಿಗಳು
ಆಪ್ತ ಬಂಧು ದಾಸಚತುಷ್ಟರು। ಪೂಜನೀಯರು ಹರಿದಾಸರು ॥
ಎನ್ನಿಷ್ಟ ಬಾಂಧವರು, ಭಗವದ್ಭಕ್ತರು.
ಕಾಯೋ ಶ್ರೀಹರಿ ಅನಿಮಿತ್ತ ಬಂಧೂ ॥

13. ಭೂಲೋಕದಿ ಕಲಿರಾಯ। ಪಾಪ ಮಾಡಿಸಿ ಕಟ್ಟಿ ಹಾಕುವ।
ಭವಲೋಕದಿ ಗೇಣುಜಾಗ। ಕೊಟ್ಟು ಕಾಪಾಡು ತಂದೆ ॥
ಧ್ರುವ ಪ್ರಹ್ಲಾದರಿಗಾಗಿ। ಅವತಾರ ತಾಳಿದೆ।
ಕರುಣಾಮೂರುತಿ। ಮಮ ಸ್ವಾಮಿ ॥

14. ಹರಿಭಕ್ತಿ ಸ್ವಧರ್ಮ। ಸಾಂಪ್ರದಾಯ ಸನಾತನ।
ಸತ್ಸಂಗ ಸತ್ಕರ್ಮ। ಜ್ಞಾನ ಭಕ್ತಿ ವೈರಾಗ್ಯಾದಿ ॥
ಸತ್ಯ ಶೀಲವಂತರಾಗಿ। ಬಾಳ ಬೇಕು ನಿಷ್ಕಾಮದಿ।
ಇರಬೇಕು ಮನುಜ ಶ್ರೀಹರಿಯನ್ನು ನಂಬಿ ॥

15. ನಿನ್ನಂಥ ದೇವ। ಹಿಂದೆಮುಂದೆಂದಿಗುಯಿಲ್ಲ।
ನಿನ್ನಂಥ ಸ್ವಾಮಿ। ಬ್ರಹ್ಮಾಂಡದಲ್ಲೆಲ್ಲಿಯಿಲ್ಲ ॥
ಷಡ್ಗುಣೈಶ್ವರ್ಯ ಸಂಪನ್ನ। ನಿನಗೆ ನೀನೆ ಸಾಟಿ ॥
ತ್ರಿಯುಗ ತ್ರಿಗುಣವರ್ಜಿತ ತ್ರಿಸತ್ಯ ತ್ರಿಧಾಮ ॥

16. ವಿಘ್ನೇಶ್ವರಾಂತರ್ಗತ, ವಿಶ್ವಂಭರ ಮೂರುತಿ।
ವಿಶಾಲ ವಿಶ್ವವಿರಾಟಮೂರ್ತಿ. ಶ್ರೀಮನ್ನಾರಾಯಣ ॥
ಕ್ಷರಾಕ್ಷರಕೆ ಉತ್ತಮ, ಪುರುಷನಾರಾಯಣ।
ಕಾಯೋ ಶ್ರೀ ಹರಿ ಅನಿಮಿತ್ತ ಬಂಧೂ ॥

17. ಎನ್ನ ಹೃದಯಕಮಲ ನಿವಾಸ ವೈಕುಂಠವಾಸ।
ಕಪಿಲ ನಾಮಕ ಪರಮಾತ್ಮ। ಕಾಯೊ ಕಂದ ಕರವ ಮುಗಿವೇ ॥
ಸತ್ಯ ಸಂಕಲ್ಪ ಸತ್ಯ ವಾಕ್ಯ ಪರಿಪಾಲಕ
ಮಾಯಾಪತಿ ಪರವಾಸುದೇವ ಸಲಹೋ ॥

**ಪದ್ಯ -2**

## ದಶಾವತಾರ ಸ್ತೋತ್ರ

1. ತಂದೆ ತಾಯಿ ಬಂಧು ಬಳಗ ಸಿಂಧು ಶಯನನೇ।
ಭ್ರಾತೃ ಮಿತ್ರ ಪುತ್ರ ಕಳತ್ರ ಕಂಸಧ್ವಂಸಿನೀ।

2. ಎನ್ನ ಇಷ್ಟದೈವ ಶ್ರೀ ರಾಮಚಂದ್ರನೇ।
ಸ್ವಾಮಿ ಪ್ರೇಮಿ ಗುರು ದೈವ ದಾನವಾಂತಕ।

3. ಮಚ್ಛನಾಗಿ ತುಚ್ಛ ದೈತ್ಯನ ಕೊಂದೇ ನೀ।
ಸ್ವಚ್ಛ ವೇದ ಅಜನಗಿತ್ತ ಸ್ವಾಮಿ ದೇವನೇ।

4. ಕೂರ್ಮನಾಗಿ ಮಂದರೋದ್ಧಾರ ಸ್ವಾಮಿಯೆ।
ಮರ್ಮ ತಿಳಿದು ಅಮೃತ ಹಂಚಿದೆ ಮೋಹಿನಿ ಸ್ವರೂಪ।

5. ವರಾಹನಾಗಿ ಧರಣಿ ರಕ್ಷಿಸಿದಂತಹ ಶೂರನೆ।
ಹಿರಣ್ಯಕನ ಸಂಹರಿಸಿದೆ ನರಸಿಂಹ ರೂಪಿಯೆ।

6. ಬಲಿಯ ಬಾಗಿಲ ಕಾಯ್ದೆ ಭಕ್ತವತ್ಸಲ ಸ್ವಾಮಿಯೆ।
ಚೆಲುವ ವಾಮನ ಭಾಮನ ಮುದ್ದು ಮೋಹನ।

7. ದುಷ್ಟ ಕ್ಷತ್ರಿಯರ ಕೊಂದ ಭಾರ್ಗವ ರಾಮನೆ।
ಪೋ-ಸಿಷ್ಟ ಶೋಷಣೆಗಾಗಿ ನೀ ಅವತರಿಸಿದೀಯೇ।

8. ದಶಕಂಠನ ಕೊಂದು ಭೂ ಭಾರವಿಳಿಸಿದೆ।
ದಶರಥ ರಾಮರಾಜ್ಯವಾಳಿದೆ ಭೂಮಾ

9. ಗೋವರ್ಧನೋದ್ಧಾರ ಗೋಪಿಕ ಲೋಲ ಗೋಪಾಲ ಕೃಷ್ಣನೇ।
ಕಂಸಚ್ಛೇದನ ಕೌರವ ಹರಣ ಪಾಂಡವ ಪ್ರಿಯನೇ.

10. ದುಷ್ಟ ಶಿಕ್ಷಣ ಶಿಷ್ಟ ಪೋಷಕ ಬೌದ್ಧದೇವನೇ।
ಅಷ್ಟು ಕರ್ತೃತ್ವವುಳ್ಳ ವಿಷ್ಣುಮೂರ್ತಿಯೇ।

11. ಕಲಿ ಯುಗಾಂತದಲ್ಲಿ ಬರುವ ಕಲ್ಕಿ ಸ್ವರೂಪ।
ಸುಲಲಿತ ಮಹಿಮೆವುಳ್ಳ ಸರ್ವೋತ್ತಮ।

12. ಕಪಿಲ ನಾಮಕ ಪರಮಾತ್ಮ ಕಾಯೋ ತಂದೆ।
ವಿಪುಲವಾದ ನಿನ್ನ ಮಹಿಮೆ ತಿಳಿಯಲಸಾಧ್ಯ।

ಪದ್ಯ 3

1. ಅನಂತ ನಾಮಕ। ಅಜಿತ ನಾಯಕ। ಯಜ್ಞನಾಮಕ ನಮೋ ನಮೋ।
ವೃಷಭ ನಾಮಕ ಕಳಶ ನಾಮಕ। ಘೃಣಿ ನಾಮಕ ಸೂರ್ಯನಾರಾಯಣ।

2. ಅಕ್ಷರ ನಾಮಕ ಸಪ್ತ ನಾಮಕ। ವಿಶ್ವನಾಮಕ ನಮೋ ನಮೋ।
ಪುರುಷ ನಾಮಕ। ಶ್ರೇಷ್ಠ ನಾಮಕ। ಹಂಸ ನಾಮಕ ನಮೋ ನಮೋ।

3. ಅನ್ನ ನಾಮಕ ಅಖಂಡ ನಾಮಕ। ಕಪಿಲ ನಾಮಕ ನಮೋ ನಮೋ।
ಕರುಣಾಮಯ ಶ್ರೀ ವೆಂಕಟೇಶ। ಪರಾದಿ ಬಹು ರೂಪಾತ್ಮಕಗೆ ಮಂಗಳ ಜಯಮಂಗಳ ॥

## ಭಜನೆ ಹಾಡು

1. ಎನ್ನ ಮಸ್ತಕದ ಮೇಲೆ ನಿನ್ನ ಹಸ್ತವನಿಟ್ಟು।
ಘನ ಮಹಿಮ ಸಲಹೊ ಪಾಂಡುರಂಗ ॥
ನಿನ್ನ ನಂಬಿದೆ ನಯ್ಯ ಎನ್ನ ಕೈ ಬಿಡಬೇಡ।
ಮನ್ನಿಸಿ ಕಾಯೊ ಶ್ರೀ ಪಾಂಡುರಂಗಾ ॥

2. ಪಂಡರಪುರದಲ್ಲಿ ಇಟ್ಟಂಗಿ ಕಲ್ಲುಮೇಲೆ,
ಪುಂಡಲೀಕನಿಗಾಗಿ ಬಂದಿರುವೇ ॥
ಲಕುಮಿ ಸಹಿತನಾಗಿ ವೈಕುಂಠ ಬಿಟ್ಟು ಬಂದೆ
ಭಕ್ತರಿಗಾಗಿ ನೀ ಪಾಂಡುರಂಗ ॥

3. ಚಂದ್ರಭಾಗಾದಲ್ಲಿ ಮಿಂದು ಸಂಭ್ರಮದಿ ಬಂದು ನಿನ್ನ।
ಶ್ರದ್ಧೆಯಿಂದ ಸೇವಿಪರೊ ಪಾಂಡುರಂಗ।

ದಾಸರು ಸಂತರು ಭಕ್ತರು ನಿನ್ನನು।
ಸೇವಿಸಿ ಕುಣಿಯುವರು ಪಾಂಡುರಂಗಾ॥

4. ಬಂಧುಬಳಗ ನೀನೆ ತಂದೆತಾಯಿ ನೀನೆ।
ಕುಂದು ಎಣಿಸದಿರು ಪಾಂಡುರಂಗ।
ಭಕ್ತರು ನಿನ್ನನು ಭಕ್ತಿಲಿ ಕಟ್ಟುವರು।
ಭವ ಬಂಧ ಬಿಡಿಸಯ್ಯ ಪಾಂಡುರಂಗಾ॥

5. ಅಕ್ರೂರವರದ ಅಂಬರೀಷವರದಾ
ಪ್ರಹ್ಲಾದವರದ ಪಾಂಡುರಂಗ॥
ಕರಿರಾಜವರದಾ ಕಂಬೇವರದ।
ಧ್ರುವರಾಜ ವರದನೆ ಪಾಂಡುರಂಗ॥

6. ಭಕ್ತವತ್ಸಲ ಸ್ವಾಮಿ ಹರಿದಾಸರಿಗೊಲಿದೆ।
ಶಕ್ತ ಅನಂತ ನೀನೆ ಪಾಂಡುರಂಗ॥
ಕಪಿಲಾನಮಕನೆ ಕೃಪೆತೋರಿ ಸಲಹೋ।
ಕರುಣಾವಾರಧಿ ನೀ ಪಾಂಡುರಂಗಾ॥

## ಪದ : ಕಾನಡ-ರಾಗ

॥ ಪ ॥ ಇಕ್ಕೊ ನೋಡು ವೆಂಕಟೇಶನ। ಕರುಳಕರಗಳ
ಕಂಡೆವೆ ಶ್ರೀ ಪಾಂಡುರಂಗನ। ಕಟೀಕರಗಳಾ॥

1. ಕರಿರಾಜನ ಮೊರೆ ಕೇಳಿದ. ದಿವ್ಯಕರಗಳ,
ಕಡುಬೇಗದಿ ಕಂದನ ಕಾಯ್ದು, ಪಾವನಕರಗಳ
ಅಜಮಿಳನ ಉದ್ಧರಿಸಿದ, ಉದಾರ ಕರಗಳ।
ಅಂಬರೀಷನ ವ್ರತವ ಕಾಯ್ದು, ದಿವ್ಯಕರಗಳ॥

2. ವಿದುರನ ಹಾಲಿಗೆ ಹಿಗ್ಗಿದ ಶ್ರೀ ಕೃಷ್ಣನ ಕರಗಳ;
ವಿಭೀಷಣಾಗೆ ಪಟ್ಟವ ಕಟ್ಟಿದ ವೀರಕರಗಳ ॥
ಉದ್ಧವನ ಉದ್ಧರಿಸಿದ ಶುದ್ಧ ಕರಗಳ
ಪುಂಡರೀಕನ ಪೊರೆದ ಉರಿದ್ದಂಡ ಕರಗಳ ॥

3. ಭೀಷ್ಮನ ಸ್ತುತಿಗೆ ಮೆಚ್ಚಿ ಮುಕ್ತಿ ಕೊಟ್ಟ ಕರಗಳ
ಬಾಲೆಯ ಭಕ್ತಿಗೆ ಮೆಚ್ಚಿ ಅಕ್ಷಯ ಕೊಟ್ಟ ಕರಗಳ।
ಪಾಷಾಣವನ್ನು ಪಾವನ ಮಾಡಿದ ಶ್ರೀರಾಮನ ಕರಗಳ।
ಧ್ರುವನ ತಪಸಿಗೆ ಮೆಚ್ಚಿ ರಾಜ್ಯವ ಕೊಟ್ಟಕರಗಳ।

4. ಶಂಖ ಚಕ್ರ ಗದಾ ಪದ್ಮ ಧರಿಸಿದ ಕರಗಳ।
ಭಕ್ತರಾಯ್ದು ಭಕ್ತ ವತ್ಸಲನ ಕರಗಳ।
ಕಪಿಲನಾಯಕ ಪರಮಾತ್ಮನ ಕರುಣಕರಗಳ।
ನಂಬಿದ ಭಕ್ತರಿಗೆ ಮುಕ್ತಿ ಕೊಡುವ ಶ್ರೀನಿವಾಸನ ಕರಗಳ।

**॥ ರಾಗ - ಶಂಕರಾಭರಣ ॥**

।ಪ ॥ ಕಂಡೆನಾ ವೆಂಕಟರನ್ನಕಂಡೆನಾ। ಕಂಡೆನಾ ವೆಂಕಟರನ್ನ ಕಂಡೆನಾ ॥

1. ಕಂಡೆನಾ ಗೋವಿಂದನ। ತೀರ್ಥದಿ ಮಿಂದೆ ಸ್ವಾಮಿಪುಷ್ಕರದಿ
ಬಂದೆ ಆಲಯದೊಳು ವೆಂಕಟನ। ಆಹ ಕಂಡೆ ಕಣ್‌ತುಂಬ
ಈ ದಿವ್ಯ ಸುಂದರನ। ಹಿಂದು ದೈವರ ಗಂಡ ಪುಂಡರೀಕಾಕ್ಷನ್ನ ॥

2. ವಜ್ರಕಿರೀಟದ ಹೊಳಪು, ಶಂಖ ಚಕ್ರ ಕುಂಡಲ ಪದಕದಪು।
ಪಂಕಜನಯ್ಯನ ಪಿತಾಂಬ್ರ ಕೆಂಪು, ಆಹ ವಕ್ಷಸ್ಥಳದಿ
ಶ್ರೀ ಲಕ್ಷ್ಮೀಯ ಸಹಿತ। ಏಳುಗಿರಿಯ ಮೇಲೆ ಬಂದು ನಿಂತಿಹನ ॥

3. ಸುಪ್ರಭಾತ ದಿವ್ಯ ದರುಶನ। ಕರ್ಪೂರ ತುಳಸಿ ಅರ್ಚನ।
ದಿವ್ಯ ತೋಮಾಲಿ ಪೂಲಂಗಿಯನಾ। ಆಹ ಏಕಾಂತ ಸೇವೆಯ
ಶ್ರೀಕಾಂತ ವೈಭವ, ಭೂಕಾಂತನ ದಿವ್ಯ ಮುಖ ಕಮಲವನ॥

4. ತ್ರಿಯುಗ ತ್ರಿನಯ ಧರಿಸಿಹನ, ಭೂತಳದಿ ಬಂದು ನಿಂತಿಹನ।
ಶಿರಿದೇವಿ ಸಹಿತ ಮೆರೆಯುತಿಹನ। ಆಹ ಕಣ್ಣು ಸಾವಿರ
ಸಾಲ ದೀಪ ನೋಡಲು। ಏನು ಪುಣ್ಯ ನಮ್ಮದೆಂಥ ಭಾಗ್ಯವು.

5. ಹೂವಿನಂಗಿಯಲಂಕಾರ। ದಿವ್ಯಪುನಕಾಭಿಷೇಕವು ಚಂದ। ವಿಶ್ವರೂಪ
ದರುಶನ ಆನಂದ। ಆಹ ಕಸ್ತೂರಿ ಶ್ರೀಗಂಧ ಲೇಪನದಿಂದ।
ದಿವ್ಯ ಮಂಗಳ ರೂಪ। ಚೆಲುವ ಚೆನ್ನಿಗನಾ॥ ಕಂಡೆನ॥

6. ಗರುಡ ವಾಹನವೇರಿ ನಿಂತಾ। ದಿವ್ಯರಥದಲಿ ಕುಳಿತು ತಾ ಬಂದ
ವಿಧ ವಿಧ ವಾಹನ ವೇರಿದಾನಂದ। ಆಹಕಪಿಲ ನಾಮಕ
ಪರಮಾತ್ಮನು ಇರುವ। ವೆಂಕಟಾಚಲವೇ ಭೂವೈಕುಂಠ॥

## ವಂಶವಾಹಿನಿ

ಒಂದು ಕುಟುಂಬದ್ಧ ಹಿರಿಯರನ್ನು ಆ ಮನೆತನದ ಮೂಲಪುರುಷರೆಂದು ಭಾವಿಸುವ ಸಂಪ್ರದಾಯವು ಭಾರತೀಯರಲ್ಲಿದೆ. ಬಳ್ಳಾರಿಯ ನಿವಾಸಿಗಳಾದ ದೊಡ್ಡಿ ಮನೆತನದ ಪೂರ್ವಜರ ಹೆಸರು ಯೋಗಪ್ಪನವರು ಎಂದು. ಇವರು ಭಾರತವನ್ನಾಕ್ರಮಿಸಿದ ಈಸ್ಟ್ ಇಂಡಿಯಾ ಕಂಪನಿಯ ಕಾಲದವರು. ಅಂದಿನ ಕಾಲದಲ್ಲಿ ಯೋಗಪ್ಪನವರು ಆಂಗ್ಲ ವಿದ್ಯಾಭ್ಯಾಸದಲ್ಲಿ ಒಳ್ಳೆ ಪರಿಣತರಾಗಿ ಬಿ.ಎ. ಪದವೀಧರರಾಗಿದ್ದರು. ಆದುದರಿಂದ ಆಂಗ್ಲರ ದಂಡಿನ ಸ್ಥಾನವೆಂದೆನಿಸಿದ ಬಳ್ಳಾರಿಯಲ್ಲಿ ಅವರೇ ಯೋಗಪ್ಪನವರನ್ನು ಕರೆಸಿಕೊಂಡು (ಮುನ್ಸೀಫ್) ನ್ಯಾಯಾಧೀಶರ ಕೆಲಸವನ್ನೊಪ್ಪಿಸಿದರು. ಒಂದು ಸಂದರ್ಭದಲ್ಲಿ, ಆಂಗ್ಲ ಅಧಿಕಾರಿಗಳು ಯೋಗಪ್ಪನವರಿಂದ ಧನ ಸಹಾಯವನ್ನು ಸಾಲರೂಪದಲ್ಲಿ ಪಡೆದುಕೊಂಡಿದ್ದರೆಂದು

ತಿಳಿದು ಬರುವದು. ಕಾಲಾಂತರದಲ್ಲಿ ಆಂಗ್ಲರಿಂದ ಯೋಗಪ್ಪನವರಿಗೆ ವಿಶಾಲವಾದ ಬಯಲು ಪ್ರದೇಶವನ್ನೀಯಲಾಯಿತು. ಆ ಸ್ಥಳದಲ್ಲಿ ಒಂದು ಧರ್ಮಛತ್ರವನ್ನು ನಿರ್ಮಿಸಲಾಯಿತು. ಬಂದವರಿಗೆ ಅನುಕೂಲವಾಗಲೆಂದು ಬಾವಿಯನ್ನೂ ತೋಡಿಸಲಾಯಿತು. ಹೀಗೆ ಅವರು ಅನೇಕ ದಾನಧರ್ಮಾದಿ ಕಾರ್ಯಗಳನ್ನು ಮಾಡಿದರು. ನಿವೃತ್ತಿಯ ನಂತರ ಜಿನಿವಾಲರ ಉದ್ಯೋಗದಲ್ಲಿ ತೊಡಗಿದರು. ಈ ಯೋಗಪ್ಪನವರ ಧರ್ಮಪತ್ನಿಯ ಹೆಸರು ಗುಂಡಮ್ಮ ಎಂದಿದ್ದು, ಪತಿಪತ್ನಿಯರಿಂದ ಅನೇಕ ದಾನಧರ್ಮಗಳು ನಡೆದುಹೋದವು. ಈ ದಂಪತಿಗಳ ಕಾಲದಲ್ಲಿಯೇ ಬಳ್ಳಾರಿಯಲ್ಲಿ ವಿಶಾಲವಾದ ಮನೆಯು ನಿರ್ಮಾಣಗೊಂಡಿತು. ಯೋಗಪ್ಪನವರಿಗೆ ತಮ್ಮಪ್ಪನವರೆಂಬ ಸೋದರರೊಬ್ಬರಿದ್ದರು.

ಯೋಗಪ್ಪ ಹಾಗೂ ಗುಂಡಮ್ಮನವರಿಗೆ ಎರಡು ಸಂತಾನ ಹಾಗೂ ಮೂವರು ಹೆಣ್ಣು ಮಕ್ಕಳಿದ್ದರು. ಹೆಣ್ಣು ಮಕ್ಕಳಿಗೆಲ್ಲ ಒಳ್ಳೇ ಮನೆತನವನ್ನು ಹುಡುಕಿ ವಿವಾಹ ಮಾಡಿಕೊಟ್ಟರು. ಇಂದು ಅವರ ಸಂತಾನದಲ್ಲಿ ಮಕ್ಕಳು, ಮೊಮ್ಮಕ್ಕಳು ಹೀಗೆ ವಿಶಾಲವಾಗಿ ಆ ಸಂತಾನದ ಬಳ್ಳಿಯು ಬೆಳೆದುಕೊಂಡಿದೆ.

ಯೋಗಪ್ಪನವರ ಹಿರಿಯ ಮಗನ ಹೆಸರು ವೆಂಕೋಬರಾವ್. ಇವರಾದರೂ ಸಹ ಮನೆತನದ ಪರಂಪರೆಯಂತೆ ನ್ಯಾಯಾಧೀಶರಾಗಿ ಕೆಲಸ ಮಾಡಿದರು. ಹಿರಿಯರ ಪರಂಪರೆಯಂತೆ ಇವರಾದರೂ ಒಳ್ಳೆ ಧರ್ಮಾಚರಣರಾಗಿದ್ದು ಅನೇಕ ದಾನ ಧರ್ಮಗಳನ್ನು ಮಾಡಿದರು. ಇನ್ನು ಯೋಗಪ್ಪನವರ ಎರಡನೆಯ ಮಗನ ಹೆಸರು ರಾಮರಾಯ. ಈ ರಾಮರಾಯರಿಗೆ ಗೋವಿಂದರಾಯರು ಹಾಗೂ ಕೃಷ್ಣರಾಯರು ಮತ್ತು ಮಾಧವರಾಯರೆಂಬ ಮೂರು ಜನ ಗಂಡುಮಕ್ಕಳು ಜನಿಸಿದರು. ಎಲ್ಲರೂ ಹಿರಿಯರ ಪರಂಪರೆಯಂತೆ ಜೀವನ ನಡೆಸಿದರು. ಸಂತಾನ ಹಾಗೂ ಸಂಪತ್ತಿನಿಂದ ಕೂಡಿದವರಾಗಿ ದಾನ ಧರ್ಮಾದಿ ಕಾರ್ಯವನ್ನು ಮಾಡಿಕೊಂಡು ಚೆನ್ನಾಗಿ ಬಾಳಿದವರು.

ಈ ಲೇಖಕಿಯ ಮಾವನವರೆಂದರೆ ದೊಡ್ಡ ಗೋವಿಂದರಾಯರು. ಇವರೂ ಸಹ ಖ್ಯಾತ ವಕೀಲರಾಗಿದ್ದರು. ಸುಸಂಸ್ಕೃತರಾಗಿದ್ದು, ಆಚಾರ್ಯ ಮಧ್ವರ ಗ್ರಂಥಗಳ ಪಾಠಪ್ರವಚನಗಳಲ್ಲಿ ಆಸಕ್ತರಾದವರಾಗಿದ್ದರು. ಈ ಗೋವಿಂದರಾಯರಿಗೆ ನಾಲ್ಕು ಜನ ಗಂಡು ಮಕ್ಕಳು. ಒಬ್ಬಳೇ ಹೆಣ್ಣು ಮಗು. ಇವರೆಲ್ಲರೂ ಉದ್ಯೋಗ ನಿರತರಾಗಿ ಸಂಪ್ರದಾಯಬದ್ಧರಾಗಿ ಜೀವನ ಸಾಗಿಸಿದರು. ಈ ದೊಡ್ಡ ಗೋವಿಂದರಾಯರ

ಎರಡನೇ ಮಗನೇ ನನ್ನ ಭಾಗ್ಯದೇವತೆಯಾದ ದೊಡ್ಡಿ ಗುಂಡೂರಾಯರು. ತಂದೆಯ ಪರಂಪರೆಯಂತೆ ಇವರೂ ಸಹ ನ್ಯಾಯವಾದಿಗಳಾಗಿ ಹೈಕೋರ್ಟ್, ಸುಪ್ರೀಂ ಕೋರ್ಟ್‌ಗಳಲ್ಲಿ ಹೆಸರಾಂತ ವಕೀಲರೆಂದೆನಿಸಿಕೊಂಡರು. ತಮ್ಮ ಪೂರ್ವಜರಂತೆ ವೇದಾಂತಾಭ್ಯಾಸದಲ್ಲಿ ಹೆಚ್ಚಿನ ಒಲವನ್ನು ತೋರಿಸಿದವರು. ಅನೇಕ ಹೋಮ ಹವನಾದಿ ಕಾರ್ಯಗಳನ್ನು ನಡೆಸಿದರು. ಇವರಿಗೆ ಆರು ಜನ ಗಂಡು ಮಕ್ಕಳು.

ನಮ್ಮ ಆರು ಜನ ಗಂಡು ಮಕ್ಕಳಲ್ಲಿ ಮೊದಲನೇಯವರಾದ ಶ್ರೀ ದೊಡ್ಡಿ ವೇಣು ಗೋಪಾಲರಾಯರು ಗೋವಾದ ಹೆಸರಾಂತ ಕಂಪನಿಯ ಡೈರೆಕ್ಟರರಾಗಿ ಕರ್ನಾಟಕ ಸಂಘದ ಸಂಚಾಲಕರಾಗಿ ಗೋವೆಯಲ್ಲಿದ್ದುಕೊಂಡು ಕೆಲಸ ಮಾಡುತ್ತಿದ್ದಾರೆ.

ಎರಡನೆಯವರಾದ ಶ್ರೀ ದೊಡ್ಡಿ ಅಜಿತಕುಮಾರರು ಯು.ಕೆ.ಯಲ್ಲಿಯ ಪೂಲ್ ಎಂಬಲ್ಲಿದ್ದುಕೊಂಡು ಖ್ಯಾತ ಡಾಕ್ಟರರೆನಿಸಿಕೊಂಡು ಹಿಂದೂ ದೇವಾಲಯಗಳ ಸೇವೆಯಲ್ಲಿ ಸಕ್ರಿಯ ಭಾಗವಹಿಸುತ್ತ ವಿದೇಶದಲ್ಲಿದ್ದಾರೆ.

ಮೂರನೆಯವರಾದ ಶ್ರೀ ದೊಡ್ಡಿ ವೆಂಕಟಗಿರಿರಾಯರು ಅಮೇರಿಕಾದಲ್ಲಿ ಸೈಂಟಿಸ್ಟ್ ಎಂದು ಕೆಲಸ ಮಾಡುತ್ತಾ ಅವರೂ ವಿದೇಶದಲ್ಲಿದ್ದಾರೆ.

ನಾಲ್ಕನೇ ಯವರಾದ ಶ್ರೀ ದೊಡ್ಡಿ ಲಕ್ಷ್ಮೀನಾರಾಯಣರಾಯರು ತಮ್ಮ ತಂದೆ ಯಂತೆ ಕರ್ನಾಟಕ ರಾಜ್ಯದ ಹೈಕೋರ್ಟಿನಲ್ಲಿ ಖ್ಯಾತ ವಕೀಲರೆಂದು ಕಾರ್ಯ ನಿರತರಾಗಿ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

ಐದನೆಯವರಾದ ಶ್ರೀ ದೊಡ್ಡಿಯೋಗಾನಂದರಾಯರು ವಳ್ಳೀ ಇಂಜನಿಯರಾಗಿದ್ದು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ.

ಆರನೆಯವರಾದ ಶ್ರೀ ದೊಡ್ಡಿ ವಾಮನರಾಯರು ಕೆಮಿಸ್ಟರಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿ ಬಳ್ಳಾರಿಯಲ್ಲಿ ವಾಸವಾಗಿದ್ದಾರೆ.

ಮಗಳಾದ ಶ್ರೀಮತಿ ಚಂದ್ರಿಕಾರವರ ಪತಿ ಶ್ರೀನಿವಾಸರಾಯರೂ ಸಹ ಬೆಂಗಳೂರಿನಲ್ಲಿ ಖ್ಯಾತ ವಕೀಲರಾಗಿದ್ದು ಈ ದಂಪತಿಗಳು ಬೆಂಗಳೂರಿನಲ್ಲಿಯೇ ವಾಸವಾಗಿದ್ದಾರೆ.

ಒಬ್ಬಳೇ ಮಗಳು. ಇದು ದೊಡ್ಡಿ ಗುಂಡೂರಾವ್ ಹಾಗೂ ಅವರ ಪತ್ನಿ

ಸುಧಾಬಾಯಿಯ ಸಂತಾನವೆಂದೆನಿಸಿಕೊಳ್ಳುವರು. ಬಳ್ಳಾರಿಯ ಉಭಯ ವಿದ್ಯಾ ಪಾರಂಗತರಾದ ಪಂ.ಘೂ.ಳಿ. ಕೃಷ್ಣಮೂರ್ತಿಗಳಿಂದ ನನಗೆ 'ಕಪಿಲ' ಎಂಬ ಅಂಕಿತವು ಲಭಿಸಿತು. ನನ್ನ ಕೃತಿಗಳಿಗೆ ಪೂಜ್ಯ ಪೇಜಾವರ ಮಠದ ಶ್ರೀ ವಿಶ್ವೇಶತೀರ್ಥರಿಂದ ಮುನ್ನುಡಿಯ ಅನುಗ್ರಹವು ಲಭಿಸಿತು. ಹೀಗೆ ಯೋಗಪ್ಪನವರಿಂದಾರಂಭಗೊಂಡು ಇಂದಿನವರೆಗೆ ನಾಲ್ಕು ತಲೆಮಾರಿನ ವಂಶವಾಹಿನಿಯನ್ನು ಇಲ್ಲಿ ಕೊಡಲಾಗಿರುವುದು. ಈ ನಾಲ್ಕು ತಲೆಮಾರಿನವರಿಂದ ಈವತ್ತಿನವರೆಗೆ ಶಾಸ್ತ್ರಾಭ್ಯಾಸ, ಸಾಹಿತ್ಯಾಭ್ಯಾಸ, ನ್ಯಾಯವೃತ್ತಿ, ವೈದ್ಯಕೀಯ ವೃತ್ತಿಯ ಸೇವೆಯೊಂದಿಗೆ, ಗೋವಾ, ಅಮೇರಿಕಾ, ಮೊದಲಾದ ಪರಸ್ಥಳಗಳಲ್ಲಿದ್ದುಕೊಂಡು ಅಲ್ಲಿಯ ಸಂಘ ಸಂಸ್ಥೆಗಳೊಂದಿಗೆ ಒಂದಾಗಿ ಬೆರೆತು ತಮ್ಮ ಕೈಲಾದ ಸಮಾಜ ಸೇವೆಯಲ್ಲಿ ನಿರತರಾಗಿರುವರೆಂದು ತಿಳಿಸಲು ನನಗೆ ಸಂತೋಷವೆನಿಸುವದು.

## "ಈ ಕೆಳಕಂಡ ನನ್ನ ಕೃತಿಗಳು"

1. ಶ್ರೀಹರಿಗುರುಭಜನ ಪಥ
2. ಕಪಿಲಕೀರ್ತನ ಮಂಜರಿ
3. ಪತಿವ್ರತಾಶಿರೋಮಣಿಗಳ ಕಥೆಗಳು
4. ವ್ರತಪಾರಿಜಾತ
5. ವೈಷ್ಣವಸ್ತ್ರೀಧರ್ಮಗಳು
6. ಶ್ರೀಮನ್ಮಹಾಭಾರತವು ಪಗೀತಿಕಾಮಾಲ
7. ಕ್ಷರಾಕ್ಷರಕೆ ಉತ್ತಮಪುರುಷ ಶ್ರೀಹರಿಮಹಿಮೆ
8. ಷೋಡಶಕರ್ಮಗಳು
9. ಶ್ರೀಕೃಷ್ಣಚರಿತ ಮಧುರಾಮೃತ
10. ಓರಬಾಯಿ ಲಕ್ಷ್ಮೀದೇವಮ್ಮನ ಕೃತಿಗಳ ಸಂಗ್ರಹ.
11. ಕ್ಯಾಸೆಟ್ ಬಿಡುಗಡೆ (ಆಯ್ದ ದೇವರ ನಾಮಗಳು)
12. ಸಾಹಿತ್ಯಮಂಜರಿ ( ಈ ಕೃತಿ ಮುದ್ರಣಕ್ಕೆ ತಯಾರಾಗಿದೆ)
13. ಶ್ರೀಮಧ್ವಲೀಲಾಮೃತ (ಈ ಕೃತಿ ಮುದ್ರಣಕ್ಕೆ ತಯಾರಾಗಿದೆ)
14. ಶುಭಪ್ರದ ಗೌರಿ ಹಾಡುಗಳು.

# ವಾಚಕನ ಮಾತು

ಸಾಹಿತ್ಯ ಸೇವೆಯಲ್ಲಿ ಸ್ತ್ರೀ ಪುರುಷ ಎಂಬ ಬೇಧಭಾವಗಳಿಲ್ಲ. ಸಮಗ್ರ ಭಾರತದಲ್ಲಿ ಪುರುಷರಷ್ಟೇ ಸ್ತ್ರೀಯರಿಂದಲೂ ಅಮೋಘವಾದ ಸಾಹಿತ್ಯ ಸೇವೆಯಾಗಿದೆ. ಸಂತಸಾಹಿತ್ಯದಲ್ಲಿ ಮೀರಾ, ಸಖುಬಾಯಿ, ಮುಕ್ತಾಬಾಯಿ, ಬಹೀಣಾಬಾಯಿ ಮೊದಲಾದವರು ಪ್ರಾಂತೀಯ ಭಾಷೆಗಳಲ್ಲಿ ಭಗವತ್ಪರವಾದ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ನಮ್ಮ ನಾಡಿನಲ್ಲಿಯೂ ಸಹ, ಹರಪನಹಳ್ಳಿ, ಹೆಳವನಕಟ್ಟೆ, ಹಾಗೂ ಗಲಗಲಿ ಮೊದಲಾದ ಗ್ರಾಮನಿವಾಸಿಗಳಿಂದ ರಚಿತವಾದ ಭಕ್ತಿಸಾಹಿತ್ಯವು ಅಭ್ಯಾಸಕ್ಕೆ ಬಹು ಮೌಲ್ಯದ ಕೃತಿಗಳಾಗಿವೆ. ಈ ಪರಂಪರೆಯು ಇಂದಿಗೂ ನಿಧಾನ ಗತಿಯಲ್ಲಿ ಮುಂದುವರೆದು ಬಂದಿದೆ; ಈ ಇಪ್ಪತ್ತನೇ ಶತಮಾನದಲ್ಲಿ ಶ್ರೀಮತಿ ದೊಡ್ಡಿ ಸುಧಾಬಾಯಿಯವರಿಂದ ರಚಿತವಾದ ಭಕ್ತಿ ಸಾಹಿತ್ಯ ಅಥವಾ ಸಂತಸಾಹಿತ್ಯ ಇಲ್ಲವೇ ದಾಸಸಾಹಿತ್ಯವಂತೂ ಅಮೋಘವಾದ ರೀತಿಯಲ್ಲಿ ಹೊರಹೊಮ್ಮಿ ಬಂದಿದೆ.

ಶ್ರೀಮತಿಯವರ ಜನನವಾದುದು 23.12.23ರಲ್ಲಿ, ಆಂಧ್ರ ಪ್ರದೇಶದ ಕಡಪ ಜಿಲ್ಲೆಯಲ್ಲಿ. ಬಾಲ್ಯದ ವಿದ್ಯಾಭ್ಯಾಸವೆಲ್ಲ ತೆಲುಗಿನಲ್ಲಿಯೇ ಮುಗಿಸಿದರು. ಇವರು ಬೆಳೆದ ತವರು ಸುಸಂಸ್ಕೃತ ವಿದ್ವಾಂಸರ ಮನೆತನವಾಗಿತ್ತು. ಸದಾಕಾಲವೂ ಮನೆಯಲ್ಲಿ ಸತ್ಕಥಾಲಾಪಗಳು ನಡೆಯುತ್ತಿದ್ದವು. ಇದರಿಂದಾಗಿ ಬಾಲ್ಯದಿಂದಲೇ ಸುಧಾಬಾಯಿಯವರ ಮನಸ್ಸು ಆಧ್ಯಾತ್ಮ ಚಿಂತನದತ್ತ ವಾಲುವಂತಾಯಿತು. ಆಚಾರ್ಯ ಮಧ್ವರ ತತ್ವಚಿಂತನೆಯಲ್ಲಿ ಹೆತ್ತವರು ಆಗಾಗ ಇವರಿಗೆ ನೆರವಾಗತೊಡಗಿದರು.

ಶ್ರೀಮತಿಯವರು ಬಳ್ಳಾರಿಯ ಹೆಸರಾಂತ ಮನೆತನವೆನಿಸಿದ ದೊಡ್ಡಿ ಗುಂಡೂರಾಯರ ಧರ್ಮಪತ್ನಿಯಾಗಿ ಬಳ್ಳಾರಿಗೆ ಬಂದ ನಂತರ ಪತಿಯ ಒಲವಿನೊಂದಿಗೆ ಪರಿಸರದ ಪ್ರಭಾವದಿಂದಾಗಿ ಅವರು ಕನ್ನಡ ಸಾಹಿತ್ಯಾಭ್ಯಾಸದಲ್ಲಿ ನಿರತರಾದರು. ಹರಿಕಥಾಮೃತಸಾರದೊಂದಿಗೆ ದಾಸರಪದ ಪದ್ಯಗಳ ಅಭ್ಯಾಸವನ್ನಾರಂಭಿಸಿದರು. ಗುಂಡೂರಾಯರು ಬಳ್ಳಾರಿ ಜಿಲ್ಲೆಯ ಶ್ರೇಷ್ಠ ನ್ಯಾಯವಾದಿಗಳಾಗಿದ್ದರು. ಅವರ ಮನೆತನವು ವೈಷ್ಣವ ಸಿದ್ಧಾಂತದಲ್ಲಿ ದಕ್ಷದೀಕ್ಷಾಬದ್ಧವಾದ ಮನೆತನವೆಂದೆನಿಸಿಕೊಳ್ಳುತ್ತಿತ್ತು. ವಿದ್ವಾಸಂರಿಗೆ ಆಶ್ರಯ ತಾಣವಾಗಿತ್ತು. ಆಗಾಗ ಪೀಠಾಧಿಪತಿಗಳು ಬಂದುಹೋಗುವ ಪರಿಪಾಠವಿತ್ತು. ತುಂಬಿದ ಮನೆಯಲ್ಲಿ ಪತಿಪತ್ನಿಯರ ಅನ್ಯೋನ್ಯ ಬಾಳು ಸಾಗಿತು. ಭಗವದನುಗ್ರಹದಿಂದ ಸಂತಾನ ಸಂಪತ್ತುಗಳೆರಡರಿಂದಲೂ

ಸುಧಾಬಾಯಿ ಸಂತೃಪ್ತರಾಗಿದ್ದರು. ಅವರ ಬಾಳು ಆದರ್ಶ ದಂಪತಿಗಳ ಬಾಳೆನಿಸುತ್ತಿತ್ತು. ಭಾರತೀಯ ಪತಿವ್ರತಾ ಶಿರೋಮಣಿಯ ಸಾಕ್ಷಾತ್ ರೂಪವೇ ಸುಧಾಬಾಯಿ ಎಂದೆನ್ನುವ ತೆರದಲ್ಲಿ ಅವರು ತಮ್ಮ ಜೀವನವನ್ನು ನಡೆಸಿಕೊಂಡು ಬಂದರು.

ಪತಿಯ ಅನುರಾಗದ ಬೆಂಬಲದಿಂದಾಗಿ ಸುಧಾಬಾಯಿಯವರ ಸಾಹಿತ್ಯ ಚಿಂತನವು ಪದ್ಯರೂಪದಲ್ಲಿ ಸಾಹಿತ್ಯವಾಹಿನಿಯಾಗಿ ಹೊರಹೊಮ್ಮತೊಡಗಿತು. ಅವರ ಬಾಳು. ಭಾಗವತ ಧರ್ಮಕ್ಕೆ ಸಮರ್ಪಣೆಗೊಂಡಿತು. ಅವರ ಮೊದಲ ಕೃತಿ ಹರಿಭಜನಸುಧಾ, ಎರಡನೆಯದು ವ್ರತಪಾರಿಜಾತ, ಮೂರನೆಯದು ಕಪಿಲಕೀರ್ತನ ಮಂಜರಿ. ವೈಷ್ಣವ ಸ್ತ್ರೀಧರ್ಮ ಹೀಗೆ ಒಂದೊಂದಾಗಿ ಕೃತಿರತ್ನಗಳು ಹೊರಬರತೊಡಗಿದವು. ಅವುಗಳಲ್ಲಿ ಕೆಲವು ಪದ್ಯಗಳನ್ನು ಹಾಡಿ ಧ್ವನಿಮುದ್ರಿಕೆಯ ಸುರುಳಿಗಳೂ ಶ್ರಾವಕರಿಗೆ ದೊರೆಯುವಂತಾದವು.

ಶ್ರೀಮತಿ ಸುಧಾಬಾಯಿಯವರ ಆರಾಧ್ಯ ದೈವನೆಂದರೆ ಕಪಿಲ ನಾಮಕ ಪರಮಾತ್ಮ. ಕೃತಿರತ್ನಗಳಲ್ಲಿ ಅವರು ಕಪಿಲ ದೇವನ ಅಂಕಿತವನ್ನೇ ಬಳಸಿಕೊಂಡಿರುವರು. ಇದು ವಿಶೇಷದ ಮಹತ್ವದ್ದಾಗಿ ತೋರುವದು. ಶ್ರೀಮಾನ್ ದೊಡ್ಡಿ ಗುಂಡೂರಾಯರು ತಮ್ಮ ಎಂಭತ್ತೆರಡು ವರುಷಗಳ ತುಂಬು ಜೀವನದ ಕೊನೆಭಾಗದಲ್ಲಿ ರಾಜ್ಯದ ಶ್ರೇಷ್ಠ ನ್ಯಾಯಾಲಯದಲ್ಲಿಯೂ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ಇದರಿಂದಾಗಿ ಅವರು ಬೆಂಗಳೂರಿನಲ್ಲಿಯೇ ವಾಸ ಮಾಡಬೇಕಾಯಿತು. ಗುಂಡೂರಾಯರೊಂದಿಗೆ ಅರವತ್ತೆರಡು ವಸಂತಗಳನ್ನು ಕಳೆದ ಸುಧಾಬಾಯಿಯವರಿಗೆ ರಾಜಧಾನಿಯ ಪರಿಸರವು ಹೆಚ್ಚಿನ ಸಹಾಯ ಸೇವೆಗೆ ಅನುಕೂಲವೆನಿಸಿತು. ಇದ್ದಕ್ಕಿದ್ದಂತೆ ಗುಂಡೂರಾಯರು ವಿಧಿವಶರಾಗಿ ಹೋದಾಗ ಪತಿಯನ್ನು ಕಳೆದುಕೊಂಡ ಲೇಖಕಿಯ ಮನಸ್ಸು ಅಂತರ್ಮುಖಿಯಾಗಿ ಭಗವಂತನ ಚಿಂತನೆಯನ್ನಾರಂಭಿಸಿತು. ಅತ್ಯಂತ ಸಾತ್ವಿಕ ಪ್ರವೃತ್ತಿಯವರಾದ ಸುಧಾಭಾಯಿಯವರ ಮನಸ್ಸು ಸರ್ವಸ್ವವನ್ನೂ ತ್ಯಾಗ ಮಾಡಿ ವೈರಾಗ್ಯದತ್ತ ಹೊರಳಿತು.

ದಂಪತಿಗಳಿಬ್ಬರೂ ಒಂದು ಕಾಲದಲ್ಲಿ ಅಖಿಲ ಭಾರತ ತೀರ್ಥಯಾತ್ರೆಯನ್ನು ಕೈಕೊಂಡ ಸಂದರ್ಭವನ್ನೆಲ್ಲ ಸ್ಮರಿಸಿಕೊಂಡು "ತೀರ್ಥ ಕ್ಷೇತ್ರಗಳ ಮಹಿಮೆ" ಎಂಬ ಕೃತಿಯನ್ನು ಇತ್ತೀಚೆಗೆ ರಚಿಸಿದರು. ದಂಪತಿಗಳ ಈ ಪ್ರವಾಸವು ಮಂತ್ರಾಲಯದಿಂದ ಆರಂಭಗೊಂಡು ಹಂಪೆ, ಮಳಖೇಡ, ಚಿಪಗಿರಿ ಮೊದಲಾದವುಗಳನ್ನು ನೋಡಿಕೊಂಡು

ಉತ್ತರ ಭಾರತದತ್ತ ಪ್ರಯಾಣವು ಬೆಳೆಯಿತು. ಪವಿತ್ರ ತೀರ್ಥವೆನಿಸಿದ ಗಂಗಾ ತಟಾಕದಲ್ಲಿರುವ, ಹರಿದ್ವಾರ, ಹೃಷೀಕೇಶ, ಕಾಶೀ, ಪ್ರಯಾಗ, ಗಯಾ ಮೊದಲಾದವುಗಳನ್ನು ಮುಗಿಸಿದ ನಂತರ ದ್ವಾರಕಾ, ಮಾತೃಗಯಾ, ಪ್ರಭಾಸ ಮೊದಲಾದವುಗಳನ್ನು ನೋಡಿಕೊಂಡು ದಕ್ಷಿಣದ ರಾಮೇಶ್ವರ, ಕನ್ಯಾಕುಮಾರಿ, ಶ್ರೀರಂಗಂ, ತಿರುಕೊಯ್ಯಲೂರು ಹಾಗೂ ನಿಸರ್ಗ ರಮಣೀಯ ತಾಣವೆನಿಸಿದ ಬಿಳಿಗಿರಿ ರಂಗನ ದರ್ಶನ ಮಾಡಿಕೊಂಡು ಬೆಂಗಳೂರಿನಲ್ಲಿರುವ ತಮ್ಮ ಗುರುಗಳ ದರ್ಶನ ಪಡೆದು ಬಳ್ಳಾರಿಗೆ ತಲುಪುವವರೆಗಿನ ವರ್ಣನೆಯು ಬಹು ರಮ್ಯವಾದುದು. ಅಲ್ಲದೇ ಪ್ರತಿಯೊಂದು ಸ್ಥಳದ ಮಹಾತ್ಮೆಯನ್ನೂ ಅವರು ತಂತ್ರಸಾರೋಕ್ತವಾಗಿ ಹೇಗೆ ನೋಡಬೇಕೆಂಬುದನ್ನೂ ಬಹು ಚೆನ್ನಾಗಿ ಅಳವಡಿಸಿ ತೋರಿಸಿರುವರು. ಅಲ್ಲಲ್ಲಿ ತಾರತಮ್ಯದ ಹೊಳವು ಸಹಜವಾದ ರೀತಿಯಲ್ಲಿ ಎತ್ತಿ ತೋರಿಸಿದುದುಂಟು. ಕ್ಷೇತ್ರಗಳ ಮಹಿಮೆಗೆ ಒಳ್ಳೆ ಮೆರಗನ್ನಿತ್ತಿರುವರು. ಒಂದು ರೀತಿಯಲ್ಲಿ ಅವರ ಈ ಕೃತಿಯು ಸ್ತ್ರೀ ಲೇಖಕಿಯರಿಂದ ಬಂದ ಮೊದಲನೇ ಕ್ಷೇತ್ರ ಮಹಾತ್ಮೆಯ ಸಾಹಿತ್ಯವೆನಿಸಿಕೊಳ್ಳುವದು. ಆದುದರಿಂದ ಈ ಕಿರು ಹೊತ್ತಿಗೆಯು ಪ್ರವಾಸ ಸಾಹಿತ್ಯವನ್ನೊದಗಿಸಿದೆ ಎಂದು ಹೇಳಿದಲ್ಲಿ ತಪ್ಪಾಗಲಾರದು.

ಈ ಕೃತಿಯ ಕೊನೆಯ ಭಾಗದಲ್ಲಿ ಲೇಖಕಿಯು ತಾವು ರಚಿಸಿದ ಅನೇಕ ಪದ್ಯಗಳನ್ನು ರಾಗ ತಾಳಗಳೊಂದಿಗೆ ಒದಗಿಸಿರುವರು. ಅಲ್ಲದೇ ವಿವರವಾದ ಭಾಗವತ ಧರ್ಮವನ್ನೂ ಸಹ ವಾಚಕರ ಕೈಗೆಟುಕುವಂತೆ ನೋಡಿಕೊಂಡಿರುವುದುಂಟು.

ಶ್ರೀಮತಿ ಸುಧಾಬಾಯಿಯವರ ಈ ಸಂತಸಾಹಿತ್ಯವು ಕನ್ನಡನಾಡಿನ ಹರಿದಾಸ ಸಾಹಿತ್ಯದಲ್ಲಿ ಆಕರ ಗ್ರಂಥವಾಗಿ ಉಳಿಯುವಂತಹದು. ಇಳಿವಯಸ್ಸಿನಲ್ಲಿ ವಿರಹಿಗಳಾಗಿರುವ ಅವರ ಅಂತರಾತ್ಮದಲ್ಲಿ ಹುದುಗಿಕೊಂಡಿರುವ ಕಪಿಲದೇವನ ಅನುಗ್ರಹದಿಂದ ಇನ್ನಷ್ಟು ಆಧ್ಯಾತ್ಮದ ಸಂದೇಶ ರೂಪಕವಾದ ಕೃತಿರತ್ನಗಳು ಅವರಿಂದ ಹೊರಬರುವಂತಾಗಲಿ. ಈ ತಾಯಿಯ ಸಾಹಿತ್ಯವು ಮುಂದಿನ ಜನಾಂಗದ ಬಾಳಿಗೆ ದಾರಿದೀಪವಾಗಲಿ ಎಂದು ಆ ಕಪಿಲನಾಮಕ ಪರಮಾತ್ಮನಲ್ಲಿ ಪ್ರಾರ್ಥಿಸುತ್ತ ನನಗನಿಸಿದ ಭಾವನೆಗಳನ್ನು ಎರಡು ಮಾತುಗಳಲ್ಲಿ ಮುಗಿಸುತ್ತೇನೆ.

31[illegible]98 ಆದ್ಯ ರಾಮಾಚಾರ್ಯ

[illegible]ಹಾಲಕ್ಷ್ಮಿ ವ್ರತ



ನದಿಯ ತೀರದಲ್ಲಿರುವ ಕ್ಷೇತ್ರದಿ
ಮುದದಿಂದ ಮನೆಯು ಕಟ್ಟಲು ಬೇಕು
ಹರಿಯ ಮಂದಿರ ಒಂದು ಅಲ್ಲಿರಲು ಬೇಕು
ಹರಿಭಕ್ತರಲ್ಲಿ ವಾಸಿಸಬೇಕು

ಸಹಜ ಜೀವನ ಸಹೃದಯದಿ
ಸಹಬಾಳ್ವೆಯಿಂದಿರಬೇಕು
ಕಪಿಲಾಖ್ಯಸ್ವಾಮಿಯ ದಯಕೆ ಪಾತ್ರರಾಗಿ
ಭವಬಂಧನಗಳ ನೀಗಲು ಬೇಕು

ಮೇಧಿನಿಯೊಳು ಪ್ರತಿ ಕಣಗಳೆಣಿಸಲು
ಶಕ್ಯವು ನಿನ್ನ ಕೃಪೆಯಿಂದೇ
ಕಪಿಲನಾಮಕ ನಿನ್ನ ಅಗಣಿತಗುಣಗಳು
ತಿಳಿಯಲಸಾಧ್ಯವು ಶ್ರೀಹರಿಯೇ

ಧನವಿದ್ದವರು ಬಹುಜನವಿರುವರು
ಗುಣವಿದ್ದ ಸಜ್ಜನರತಿಸ್ವಲ್ಪವಿರುವರು
ಗುಣವೇ ಮುಖ್ಯ ಮೋಕ್ಷ ಸಾಧನೆಗೆ
ಗುಣನಿಧಿ ಕಪಿಲ ನಮಿತಪ್ರಿಯೆ ಕಾಯೆ